# ಅಪರಂಜಿ

ಏಪ್ರಿಲ್
1992

ಯುಗಾದಿ ವಿಶೇಷಾಂಕ

ಅಪರಂಜಿ ವಾರ್ಷಿಕ ಸಂಪುಟ 1991-1992

ಬೆಲೆ : 15 ರೂ.




ಸಂಪುಟ ೯ | ಅಕ್ಟೋಬರ್ ೧೯೯೧ | ಸಂಚಿಕೆ ೧

# ಗೊರೂರು ರಾಮಸ್ವಾಮಿ ಐಯ್ಯಂಗಾರ್

**ನಮ್ಮ ಊರಿನ ರಸಿಕರು,** ನನಗೆ ಒಮ್ಮೆ ಪಠ್ಯ ಪುಸ್ತಕವಾಗಿತ್ತು. ಪಠ್ಯ ಪುಸ್ತಕ ಅಂತ ಅನ್ನಿಸದಿದ್ದ ಪುಸ್ತಕವೆಂದರೆ ಅದೊಂದೇ. ಅದರಲ್ಲಿನ ಹಾಸ್ಯ ಮೆಲುನಗೆ ತರುವಂತಹದಲ್ಲ. ಬಿದ್ದು. ಬಿದ್ದು ನಗುವಂತಹ ಹಾಸ್ಯ. ಗೊರೂರರ ಅಮೆರಿಕ ಪ್ರವಾಸದ 'ಅಮೆರಿಕೆಯಲ್ಲಿ ಗೊರೂರು' ನನಗೆ ಬಹುಕಾಲ ಸಿಕ್ಕಿರಲಿಲ್ಲ. ಮೊನ್ನೆ ಅದನ್ನು ಓದಿದಾಗ, 'ಭಲಾ ! ಭಾರತೀಯ ಸಂಸ್ಕೃತಿಯ ನಿಜವಾದ ರಾಯಭಾರಿ' ಅನ್ನಿಸಿತು. ತುಂಬು ಜೀವನವನ್ನು ನಡೆಸಿ, ತಮ್ಮ ಪುಸ್ತಕಗಳ ಮೂಲಕ ಕನ್ನಡಿಗರೆಲ್ಲರಿಗೂ ಪ್ರಿಯರಾದ ಗೊರೂರರು ಕನ್ನಡ ಸಾಹಿತ್ಯ ಲೋಕದ ಹಿರಿಯ ಚೇತನ. ಅವರ ಕೃತಿಗಳಲ್ಲಿ ಎದ್ದು ಕಾಣುವ, ವಿನಯ, ಮೃದುತ್ವ, ಹಾಸ್ಯ ಪ್ರಜ್ಞೆ ಪಾಂಡಿತ್ಯ. ಎಲ್ಲಕ್ಕೂ ಮಿಗಿಲಾಗಿ ಜೀವನದಲ್ಲಿನ ಅತೀವ ಆಸಕ್ತಿ ಇವುಗಳನ್ನು ಅನುಕರಿಸುವುದೇ ಅವರಿಗೆ ನಾವೆಲ್ಲ ಸಲ್ಲಿಸಬಹುದಾದ ಶ್ರದ್ಧಾಂಜಲಿ.


| | | |
|---|---|---|
| ಗೌರವ ಸಲಹೆಗಾರರು :<br>ಶ್ರೀ ಅ. ರಾ. ಸೇ.<br>ಶ್ರೀ ಶೇಷಗಿರಿ<br><br>ಸಂಪಾದಕ :<br>**ಶಿವಕುಮಾರ್** | ಚಂದಾ ವಿವರ :<br>ಬಿಡಿ ಪ್ರತಿ<br>2 ರೂ. 50 ಪೈ.<br>ವಾರ್ಷಿಕ ಚಂದಾ<br>25 ರೂ.<br>ಆಜೀವ ಚಂದಾ<br>250 ರೂ. | ವಿಳಾಸ<br>ಅಪರಂಜಿ ಕಾರ್ಯಾಲಯ<br>36, 6ನೆಯ ಮುಖ್ಯ ರಸ್ತೆ<br>ಮಲ್ಲೇಶ್ವರಂ<br>ಬೆಂಗಳೂರು 560003<br>ಕೆಲಸದ ವೇಳೆ :<br>ಬೆಳಗ್ಗೆ 8ರಿಂದ 10 ಗಂಟೆಯ ವರೆಗೆ |

ಈ ಸಂಚಿಕೆಯಲ್ಲಿ



---


ಮುದ್ರಣ : ಇಂಪ್ರೆಷನ್ಸ್, ಮಲ್ಲೇಶ್ವರಂ, ಬೆಂಗಳೂರು
ದೂರವಾಣಿ ; 342144

# ಅಪರಂಜಿ
(ತಿಳಿನಗೆಯ ಕಾರಂಜಿ)

ಸಂಪುಟ ೯ ಅಕ್ಟೋಬರ್ ೧೯೯೧ ಸಂಚಿಕೆ ೧

ಮೀಂಗುಲಿಗರೂ, ಜೂಜುಕೋರರೂ ಬ್ರಹ್ಮವೇ.

— ಉಪನಿಷತ್ತು

ಎಲ್ಲವೂ ಬ್ರಹ್ಮವೇ, ಎಂದ ಮೇಲೆ ದಾಶ, ಕಿತವಾದಿಗಳೂ ಬ್ರಹ್ಮವೇ ಎಂದು ಉಪನಿಷತ್ತು ಹೇಳಿದೆ.

ನಮೋ ನಮೋ ಅಜ್ಞಾನಿ ನೀನೇ, ನಮೋ ನಮೋ ಸುಜ್ಞಾನಿ ನೀನೇ; ನಮೋ ನಮೋ ದುರ್ಬುದ್ಧಿ ನೀನೇ. ನಮೋ ನಮೋ ಸದ್ಬುದ್ಧಿ ನೀನೇ ಎಂದು ಚಿದಾನಂದಾವಧೂತರು ಶ್ರೀ ದೇವಿಯನ್ನು ಸ್ತುತಿಸಿದ್ದಾರೆ.

ಬ್ರಹ್ಮಾತ್ಮೈಕ್ಯವನ್ನು ಒಪ್ಪಿಕೊಂಡವರಿಗೆ, ಭಕ್ತರಿಗೆ (ಈ ಇಬ್ಬರೂ ಒಂದೇ) ಇದು ಹಾಗೆಯೇ ಸರಿ.

ಜಗತ್ಕಾರಣವನ್ನು ಒಪ್ಪಿಕೊಂಡವರು ಹೀಗೆ ಹೇಳಿದರೆ, ಒಪ್ಪಿಕೊಳ್ಳದ ಶಿಶ್ನೋದರ ಪರಾಯಣರ ಲೋಕದಲ್ಲೂ ಹೀಗೇ ಎಂದು ಕಂಡುಬರುತ್ತಿದೆ.

ಮೂತ್ರದಲ್ಲಿ ಮೀನು ಹಿಡಿಯುವವರಿಗೂ, fishing in troubled water ಉದ್ಯೋಗಸ್ಥರಿಗೂ ದಾಶ ಕಿತವಾದಿಗಳೇ ದೊಡ್ಡವರೆಂದು ಕಂಡುಬರುತ್ತದೆ.

ಸಮತಾವಾದ ಸಮತಾ ಹೊಡೆದಿದೆ, ಜಗತ್ತು ಪ್ರಜಾಪ್ರಭುತ್ವದತ್ತ ನಡೆದಿದೆ ಎಂದು ಚಿಂತಕರು ಚಿಂತಿಸುತ್ತಿದ್ದಾರೆ.

ಎಲ್ಲೆಲ್ಲೂ ಒಂದಲ್ಲ ಒಂದು ಕಾರಣದಿಂದ ಜಗಳ ಹೆಚ್ಚುತ್ತಿದೆ, ಅಷ್ಟೇ. ಗೆದ್ದವರನ್ನು, ಮುಖಸ್ತುತಿ ಮಾಡುತ್ತಾ, ಅರ್ಬುದವನ್ನು ಮುಚ್ಚಿಹಾಕುವವರ ಕಾಲ ಇದು. ಹಿಂದೂ, ಮುಂದೂ ಅಷ್ಟೇ. ಬಾಲ್ಯದಲ್ಲೇ ಇರುವ ಅಪರಂಜಿಗೆ ಇದನ್ನು ಕಂಡು ವಿಷಾದದ ನಗು.

ಗೊರೂರು




ಪ್ರಕಾಶ್

---

ಏನೋ ಬೋರಿಸ್ ತಾರಾಟ ಅಂದರೆ,
ಕ್ರೆಮ್ಲಿನ್‌ನಲ್ಲಿ ದೇವರೂಟ ಅಂದನಂತೆ!

* * *

ಕಲ್ಲು ಗಣಿ ಗುತ್ತಿಗೆ ಅಕ್ರಮ; ವಿರೋಧ.

—ಸದನದ ಸುದ್ದಿ.

ಇಂತಹ ಗುತ್ತಿಗೆಗಳಿಗೆ ಕಲ್ಲು ಹಾಕಲೇಬೇಕು!

* * *

ಸರ್ಕಾರಿ ವೈದ್ಯರ ಖಾಸಗಿ ಪ್ರಾಕ್ಟೀಸ್‌ಗೆ ತಡೆ ಸಂಭವ.

—ಆರೋಗ್ಯ ಸಚಿವೆ.

ಸರಿ, ಇದೂ ವಿಜಯನಗರದ ಉಕ್ಕಿನ ಕಾರ್ಖಾನೆಯಂತೆ!

* * *

ಹೊಸಪೇಟೆಯ ಪ್ರವಾಸಿ ಬಂಗ್ಲೆಯಲ್ಲಿ
ಸಿಗರೇಟ್‌ನಿಂದ ಸಚಿವರ ಹಾಸಿಗೆಗೆ ಬೆಂಕಿ

—(ಬಿಸಿ) ಸುದ್ದಿ.

ಹತ್ತಿರ ಬೇಕಾದಷ್ಟು ನೀರಿದೆ ಅಂತ ನಿರ್ಲಿಪ್ತರಾಗಿದ್ದರೇನೋ?

'ದುರದೃಷ್ಟಕರ' ಎಂಬ ಶಬ್ದವನ್ನೇ ಶಬ್ದಕೋಶದಿಂದ ತೆಗೆದು ಹಾಕಬೇಕು.

—ಬಿ.ಸಿ.ಸಿ. ಐ. ಬ್ಯಾಂಕ್ ಸಂಸ್ಥಾಪಕ.

ಆಗ ಅವರ ಭಂಡಾರ ತಿರುಗಿ ತುಂಬುತ್ತೇನು ?

* * *

ಭಾರತ–ಪಾಕ್ ಗಡಿಯಲ್ಲಿ ಗುಂಡಿನ ಚಕಮಕಿ.

—ಪತ್ರಿಕೆ

ಎರಡೂ ದೇಶಗಳಲ್ಲಿ ಸುಭದ್ರ ಸರಕಾರಗಳಿಲ್ಲದಿರುವುದೇ ಇದಕ್ಕೆ ಕಾರಣ ಅಂತ ಅಪರಂಜಿ ನಕ್ಕಳಂತೆ !

* * *

ವಿಧಾನಸಭೆಯ ಕಲಾಪ ನೋಡಲು ಮಾರ್ಗರೇಟ್ ಆಳ್ವ ಆಗಮನ.

—ಸುದ್ದಿ.

ಕಲಾಪ ಅನ್ನೋದಕ್ಕಿಂತ ಕಲಹ ಅನ್ನಬಹುದು !

* * *

ಕಾಂಗ್ರೆ ಸರ್ಕಾರದ ವಿರುದ್ಧ ಅವಿಶ್ವಾಸ ನಿರ್ಣಯ ತಿರಸ್ಕೃತ.

—ಶೀರ್ಷಿಕೆ

ಸಧ್ಯ, ಇನ್ನು ನಾವೆಲ್ಲ ಅಚಲ ವಿಶ್ವಾಸದಿಂದ ಹಾಯಾಗಿರಬಹುದು !

* * *

ಹಿಂದುಳಿದವರ ಅಧ್ಯಯನ ಸಂಸ್ಥೆ ಸ್ಥಾಪನೆ ಪರಿಶೀಲನೆಯಲ್ಲಿ

—ಸುದ್ದಿ

ಈ ಕಾರ್ಯ ಮುಂದುವರೆಯಲಿ !

* * *

ಸ್ನಾನದ ಮನೆಯಲ್ಲಿ ನಿಮಗೆ
ಇನ್ನೊಬ್ಬರ ಹಂಗಿಲ್ಲ

—ಅಮಿತಾಬ್ ಬಚ್ಚನ್

ನೀರು ನಿಲ್ಲುವ ತನಕ !



6

# ಒಂದಾನೊಂದು ಕಾಲದಲ್ಲಿ

ಶಿವರಾಮ ಕಾರಂತ

---

ಒಂದಾನೊಂದು ಕಾಲದಲ್ಲಿ ಊರಿಗೊಬ್ಬ ಅರಸನಿದ್ದ
ಇದ್ದ ಅರಸ ಒಬ್ಬನೇ ಒಬ್ಬ; ಇದ್ದ ರಾಜ್ಯ ಒಂದೇ ಒಂದು
ಇರುವ ರಾಜ್ಯಕೆ ಅರಸ ಸಾಕು ಆಳಿಸಿಕೊಂಬ ಜನ ಬೇಕು
ಆದರೇನು ? ಜನರೇ ಇಲ್ಲ—ಊರಲ್ಲವಗೆ !
ಎಲ್ಲಿಂದ ತರಲಿ, ಏನು ಮಾಡಲಿ—ಎಂಬ ಚಿಂತೆ ಬಂತು
ಮಕ್ಕಳೂ ಇಲ್ಲ ! ಮರಿಯೂ ಇಲ್ಲ ! ರಾಣಿಯೆ ಇಲ್ಲದ ದೊರೆ—ಅವಗೆ.
ಹೀಗೆ ಇಪ್ಪ ಕಾಲದಲ್ಲೊಬ್ಬ—ಋಷಿ ಬಂದ ಅವನಿರುವಲ್ಲಿಗೆ
ಬಂದ ಋಷಿ ಅರಸನ್ನ ಕಂಡ—ಹೆಂಡಿರಿಲ್ಲದ ದೊರೆಯ ಕಂಡ
ದೊರೆಯೇ ನೀನು ರಾಣಿ ಇಲ್ಲದೆ ರಾಜ್ಯ ಆಳುವಿ
ನೀ ಸತ್ತ ಮೇಲ್ ನೋಡು—ಈ ರಾಜ್ಯಕೆ ಯಾರು ?
ಆಗ ಅರಸ ಯೋಚಿಸಿ ಕೇಳ್ದ
"ಋಷಿಯೆ ನೀನು ಕಂಡೆಯಲ್ಲ
ಕರುಣೆ ಬೀರಿ ಕೊಡಿಸು ಬೇಕಾದ್ದೆಲ್ಲ"
ಎಂದು ಆತ ಕೇಳ್ದ—ಕ್ಷಣಕ್ಕೆ
ಋಷಿಯು ಕೊಟ್ಟ—ವರವನೊಂದ !
"ಕೊಟ್ಟೆ ನೋಡು—ನೀ ಮುಟ್ಟಿದ್ದೆಲ್ಲ ಇಡಲಿ ಮರಿ"
ಎಂದು ಹರಸಿ ಹೋದ ಆ ಋಷಿ
ಕೊಟ್ಟ ವರ ಆಗಲೇ ಇಲ್ಲ ಹುಸಿ
ಆತ ಹೊರಟು ಹೋದ ಬಳಿಕ
ಏನೆಲ್ಲಾಯ್ತು ಗೊತ್ತೇ ನಿಮಗೆ ?

ಅತ್ತ, ಇತ್ತ, ಸುತ್ತಮುತ್ತ, ಎತ್ತ ಕಂಡ್ರೂ ಮಕ್ಕಳು.
ಹುಟ್ಟಿದ ಗಳಿಗೆಗೆ ತಿಂದು, ಬೆಳೆದು, ಆದ್ರು ಭಾರಿ ಜನರು !
ದೇಶದ ತುಂಬ ಜನರೇ ಜನರು !
ಎಲ್ಲ್ ನೋಡಿದ್ರೂ ಅವರೇ ಅವರು !

‘ಗೆದ್ದೆ ತಾನು, ಗೆದ್ದು ಬಿಟ್ಟೆ’—ಎಂದು ತಿಳಿದ ದೊರೆ.
ಅವರೊಳಗಿಂದ ಮದ್ವಿ ಆದ
ಮದುವಿ ಆಗಿ ಮಕ್ಕಳೂ ಆದರು.
ತೊಡಗಿತು ನೋಡಿ ಅವನ ಭವಣೆ !
ಮಕ್ಕಳಲ್ಲವೆ ಅವರು, ನೋಡಿ !
ಉಂಬೋಕೆ ತಿಂಬೋಕೆ ಕಾಳು ಬೇಡ್ವೆ?
ಕಾಳು ಬೇಳೆ ತಿಂಬೋಕಿಲ್ದೆ ದಂಗೆ ಎದ್ರು ಜನರು
ಜಗಳ ಕಾದ್ರು ‘ದೊರೆಯ ಮಕ್ಕಳು ತಾವು’ ಎಂದ್ರು,
ಸಂಖ್ಯೆ ಹೆಚ್ಚಿ, ಮಕ್ಕಳು ಬೆಳೆದು
ಯಾವತ್ತು ರಾಜ್ಯ ತಮ್ಮದೆಂದು
ಹಕ್ಕಿಗಾಗಿ ಜಗಳ ತೆಗೆದ್ರು ತೆಗೆದೇ ತೆಗೆದ್ರು
ಕಾಡಿ, ಕಾದಿ, ಗೆದ್ರು, ಸೋತ್ರು; ನೆತ್ತರು ಕೆಡೆದ್ರು
ಇದನ್ನು ಕಂಡು ಅರಸ ನೊಂದ !
ಕಂಗಾಲಾಗಿ ಬೆಂದೇ ಬೆಂದ !
‘ಹೀಂಗೆ ಆದ್ರೆ ಚಂದಲ್ಲೆ’ಂದ !
ರಾಜ್ಯಕ್ಕೆ ರಾಜ್ಯ ಕಕ್ಕಾಬಿಕ್ಕಿ !
ಎಲ್ಲಿ ಕಂಡ್ರು ಧಕ್ಕಾ ಮುಕ್ಕಿ !
ಅಪ್ಪನ ಗುರ್ತು ಮಕ್ಕಳಿಗಿಲ್ಲ !
ಮಕ್ಕಳ ಗುರುತು ಅಪ್ಪಂದ್ರಿಗಿಲ್ಲ.
ಅಪ್ಪಂದಿರಪ್ಪ ಅತ್ತು, ಸೋತು, ಕಂಗಾಲಾದ,
ಕಂಗಾಲಾದ ಗಳಿಗೆಗೆ ನೆನೆದ–ವರವಿತ್ತ ಋಷೀಸ !
ಋಷೀಸ ನೆನೆದು ತಪಸ್ಸು ಗೈದ !
ತಪಸ್ಸಿನಲ್ಲಿ ಅವನನ್ನು ಬೈದ !
ನಿನ್ನಿಂದಾಯ್ತು ರಾಜ್ಯ ಹಾಳು,
ಅಳವಡಿಸಲಾಗದ ಮಕ್ಕಳ ಗೋಳು !
“ಎಲ್ಲಿ ನೋಡಿದ್ರೂ ಧಕ್ಕಾ ಮುಕ್ಕಿ
ಎಲ್ಲ ಜೀವಿಗಳು ಕಕ್ಕಾ ಬಿಕ್ಕಿ !
ನೀನಿತ್ತ ವರದಿಂದಾಯ್ತು ಹೀಗೆ,
ಕೊಡಿಸು ನನಗೆ—ಶಾಂತಿ ಸುಖ.
ಬ್ಯಾಡವೇ ಬ್ಯಾಡ ಮಕ್ಕಳ ಗೋಳು”

## 8

ನೆನೆದ ಚಣಕೆ ಅವನೇ ಬಂದ,
ಕಣ್ಣು ಕಣ್ಣು ಬಿಟ್ಟು ಯೋಚ್ನೆ ಮಾಡಿ,
ಪರಿಹಾರವೇನೆಂದು ಹೇಳಿಯೂ ಬಿಟ್ಟ.
"ಅಯ್ಯಾ ದೊರೆಯೇ, ನೀ ಸುಖದಲ್ಲಿದ್ದೆ
ಒಬ್ಬನೇ ಅರಸ ಇದ್ದ ಕಾಲಕ್ಕೆ
ಪ್ರಜೆಗಳ ಕಾಟ ಇರಲಿಲ್ಲ ನಿಜ,
ಬರಗಾಲ ಕೂಡ ಬರ್ಲಿಲ್ಲ—ನಿಜ
ತಿನ್ನಬೋದಿತ್ತು, ಉಣ್ಣಬೋದಿತ್ತು
'ಆಳೋಕೆ ಜನಗಳು ಬೇಕು' ಎಂದೆ !
ಕೊಟ್ಟೆ ಮಕ್ಕಳ ಈಗೇನೆಂಬೆ ?
ಸುಖ ಶಾಂತಿ ಬಯಸೋ ಮಂದಿ—
ಒಬ್ಬರೇ ಇದ್ದರೆ ಚಂದ ನೋಡು.
ಒಬ್ಬನ ಮಗ್ಗುಲಿಗೆ ಇನ್ನೊಬ್ಬ ಇದ್ರೆ ।
ಬಂತೇ ಬಂತು ಜಗಳ, ಖಾತ್ರಿ !
ಮೊದಲಿನಂತೆ ಆಗಲಿ ಇನ್ನು–
ನೀನೊಬ್ಬನೇ ಬಾಳು, ನಿನ್ನನ್ನಿ ಆಳು !
ಬರಗಾಲ ಕಾಣದೆ ಚಿರಕಾಲ ಬಾಳು !"
ಎಂದು ಹೋದ ಆ ಋಷಿ
ದೊರೆಗೆ ಆದೀತು ಬಲು ಖುಷಿ

(3 ಜುಲೈ 1990
ಸಾ ಸಾಂಟೋಸ್
ಬ್ರೆಜಿಲ್)



# ಬಾಲವುಳ್ಳುದು ಕುದುರೆಯು

ಡಾ ಪರಡ್ಡಿ ಮಲ್ಲಿಕಾರ್ಜುನ

ರೇ ರೇ ರಾಸಭ! ವಸ್ತ್ರಭಾರವಪನಾತ್ ಕುಗ್ರಾಸಮಶ್ನಾಸಿ ಕಿಂ ? ರಾಜಾಶ್ವಾವಸಥ. ಪ್ರಯಾಹಿ ಚಣಕಾಭ್ಯೂಷಾನ್ ಸುಖಂ ಭಕ್ಷಯ । ಸರ್ವಾನ್ ಪುಚ್ಛವತೋ ಹಯಾ ಇತಿ. ವದಂತ್ಯತ್ರಾಧಿಕಾರೇ ಸ್ಥಿತಾ: ರಾಜಾ ತೈರುಪ ದಿಷ್ಟಮೇವ ಮನುತೇ ಸತ್ಯಂ ತಟಸ್ಥಾ ಪರೇ ॥

(ಕವಿ ಕೌಮುದೀ । 97)

ಕತ್ತೆ ! ವಸ್ತ್ರವ ಹೊರುತ ಕುಗ್ರಾಸವನು ಏತಕೆ ತಿನ್ನುವೆ ? ರಾಜ ಲಾಯದಿ ಹೋಗು, ಕಡಲೆಯ ಶ್ರಮವದಿಲ್ಲದೆ ಪಡೆಯುವೆ. ಅಲ್ಲಿಯಧಿಕಾರಿಗಳು ತಿಳಿಪರು "ಬಾಲವುಳ್ಳುದು ಕುದುರೆಯು" ರಾಜನಂಬುವನವರ ಮಾತನು, ಉಳಿದ ಜನದ ನಿರಾಸ್ಥೆಯು ॥ ರಾಜ್ಯ (ಕೇಂದ್ರ ಸರಕಾರದ ಧನಸಹಾಯ ಪಡೆದು ಕಾರ್ಯವನ್ನು ನಿರ್ವಹಿಸುವ ಆಫೀಸುಗಳಲ್ಲಿ ಈ ಅವಸ್ಥೆಯು ಸಾಕ್ಷಾತ್ಕಾರವಾಗುತ್ತದೆ. ಹೇಗೆ ಹೇಗೋ ಅಧಿಕಾರಕ್ಕೆ ಬಂದವರು ಇನ್ನೂ ಮೇಲಕ್ಕೇರಬೇಕೆಂಬ ತಯಾರಿ ನಡೆಸುತ್ತಿರುವಾಗ, ಕೆಳಗಿನವರು ಹಾಕಿದ ನೋಟಿಗೆ, ಸರಿ ಇರಲಿ, ಇಲ್ಲದಿರಲಿ (ಎರಡನೆಯದೇ ಹೆಚ್ಚು ಸಂಭವ) ರುಜು ಹಾಕಿ ಕಳಿಸುವುದೇ ಅವರಿಗೆ ತ್ರಾಸದಾಯಕವಾಗಿರುತ್ತದೆ. ತಮ್ಮ ಚಿಂತೆಯೇ ತಮಗೆ ಹಾಸಲೂ ಹೊಚ್ಚಲೂ ಸಾಕಾಗಿರುವಾಗ ಅನ್ಯರ ಚಿಂತೆ ಅವರಿಗೇಕೆ ? ಕೆಲಸವು ಖಾಯಂ ಆಗಿರುವಾಗ, (ಪ್ರೊಬೇಶನ್ ಅವಧಿ ಮುಗಿದರೆ ಕೆಲಸ ಖಾಯಂ) ದುಡಿಯದಿದ್ದರೂ ದುಡ್ಡು ಬರುವುದು ನಿಶ್ಚಿತವಾಗಿರುವಾಗ ಕೆಲಸ ಮಾಡುವುದು ದಡ್ಡತನವಲ್ಲವೇ ? ಅವರು ಕೆಲಸ ಮಾಡಬೇಕಾದರೆ ದಕ್ಷಿಣೆಯನು ಕೊಡಲೇಬೇಕೆಂಬುದು ಸೂರ್ಯ ಪ್ರಕಾಶದಷ್ಟು ನಿಚ್ಚಳ. ಇದರಲ್ಲಿ ರಹಸ್ಯವಾದ ಸಂಗತಿ ಯಾವುದೂ ಇಲ್ಲ. ಇದೆಲ್ಲ ಗೊತ್ತಿದ್ದೂ ಸರಕಾರ ಯಾವ ಕ್ರಮವನ್ನೂ ಕೈಗೊಳ್ಳುವುದಿಲ್ಲ. ಈ ಪ್ರಸಂಗದಲ್ಲಿ ಕೈ ತೋರಿಸಿ ಅವಲಕ್ಷಣವೆನಿಸಿಕೊಳ್ಳುವುದಕ್ಕಿಂತಲೂ ಕುರುಡರಂತೆ ಕಂಡೂ ಕಾಣದಿರುವುದೇ ಕಿವುಡರಂತೆ ಕೇಳಿಯೂ ಕೇಳದಂತೆ ಇರುವುದೇ ಜಾಣತನದ ಲಕ್ಷಣವಲ್ಲವೇ ? ವಸ್ತುಸ್ಥಿತಿ ಹೀಗಿರುವಾಗ, ಬಡ ಬೋರೇಗೌಡ ಬೆಂಗಳೂರಿಗೆ ಬಂದರೆ ಅವನ ಅವಸ್ಥೆಯನ್ನು ವರ್ಣಿಸಲು ಬೃಹಸ್ಪತಿಗೂ ಸಾಧ್ಯವಿಲ್ಲ.

ತರ್ಕ ಸರಣಿಯಿಂದ ವಿಚಾರಿಸಿದರೂ, ಕತ್ತೆ ಕುದುರೆಗಳಲ್ಲಿ ವ್ಯತ್ಯಾಸ ಕಾಣು ವುದಿಲ್ಲ. ಆ ತರ್ಕವನ್ನು ಈ ರೀತಿ ಇಡಬಹುದು.

ಎಲ್ಲ ಕುದುರೆಗಳಿಗೆ ಬಾಲವಿದೆ.

ಕತ್ತೆಗೆ ಬಾಲವಿದೆ.

ಆದುದರಿಂದ ಕತ್ತೆ ಕುದುರೆಯಾಗಿದೆ.

ಅದ್ವೈತ ವೇದಾಂತದ ದೃಷ್ಟಿಯಿಂದ ವಿಚಾರಿಸಿದರೂ ಕತ್ತೆ ಕುದುರೆಗಳಲ್ಲಿ ವ್ಯತ್ಯಾಸವೇನೂ ಕಾಣುವುದಿಲ್ಲ. "ಸರ್ವಂ ಖಲ್ವಿದಂ ಬ್ರಹ್ಮ" ಎಂಬಂತೆಯೂ, ಒಳಗೆ ಸುಳಿವ ಆತ್ಮ ಗಂಡೂ ಅಲ್ಲ, ಹೆಣ್ಣೂ ಅಲ್ಲವೆಂಬ ಶರಣರ ನುಡಿಯಂತೆಯೂ ವ್ಯತ್ಯಾಸ ಕಾಣುವುದಿಲ್ಲ. 'ಒಳಗೆ ಸುಳಿವಾತ್ಮ ಕತ್ತೆಯೂ ಅಲ್ಲ, ಕುದುರೆಯೂ ಅಲ್ಲ' ಎಂದು ಶರಣರ ವಾಣಿಯನ್ನು ಪ್ರಸಂಗಕ್ಕೆ ತಕ್ಕಂತೆ ಬದಲಾಯಿಸಿದರೆ ತಪ್ಪಾಗದು.

ಆದುದರಿಂದ ಅಧಿಕಾರಿಗಳ ಈ ವರ್ತನೆ ಸಮರ್ಥನೀಯವಷ್ಟೇ ಅಲ್ಲ, ಅರ್ಥ ಪೂರ್ಣವೂ ಹೌದು. ಅವರ ಮಾತನ್ನು ಅರಸ (ಸರಕಾರ) ನಂಬಲೇಬೇಕು. ಏಕೆಂದರೆ ಎಲ್ಲವನ್ನೂ ಕೂಲಂಕಷವಾಗಿ ಪರೀಕ್ಷಿಸುವ ತಾಳ್ಮೆಯಾಗಲೀ, ಶಕ್ತಿಯಾಗಲೀ ಯಾವ ಸರಕಾರಕ್ಕೂ ಇಲ್ಲ. ಹೀಗೆ ಅನಿವಾರ್ಯತೆಯಿಂದಾಗಿ ರಬರ್ ಸ್ಟಾಂಪ್ ಆಗಿರುವ ಮೇಲಿನ ಅಧಿಕಾರಿಗಳ ಸ್ಥಿತಿಯನ್ನು ನೋಡಿ ನಾವು ಕನಿಕರ ಪಡಬೇಕೇ ವಿನಾ, ಅವರನ್ನು ದೂಷಿಸುವಷ್ಟು ಕಟುಕರಾಗಬಾರದು.



"ಏನು ರಾಯರೇ, ನಿಮ್ಮ ಮಗಳು ಯಾವಾಗಿಂದ ಕಾರ್ ಡ್ರೈವಿಂಗ್ ಕಲೀತಿದ್ದಾಳೆ?"

"ಬಂಪರ್ ಕಿತ್ತು, ಎರಡು ಡಿಕ್ಕಿ ಆಗೋಕ್ಕೆ ಮುಂಚಿನಿಂದ ಸ್ವಾಮಿ"

11

# ಒಂದು ಪ್ರಲಾಪ

ಸೀ. ಆರ್ ಸತ್ಯ

---

ಅಲ್ಲಾ, ನೋಡೋದಕ್ಕೆ ನಾನು ಸ್ವಲ್ಪ ಜಾಸ್ತಿ ಕಪ್ಪಗೇ ಇದೀನಿ, ಒಪ್ಪಿಕೋತೀನಿ (ಬೇರೆ ಮಾರ್ಗವೇ ಇಲ್ಲವಲ್ಲ !). ಹಾಗೆಂತ, ನಾನು ಜೀವಮಾನ ಪರ್ಯಂತ ಈ ಸಮಾಜದ ಕೈನಲ್ಲಿ ನಾ ಕಪ್ಪು ನಾ ಕಪ್ಪು ಅಂತ ಸೂಜಿ ಚುಚ್ಚಿದ ಹಾಗೆ ಮನದಟ್ಟು ಮಾಡಿಸ್ಕೊಳ್ತಾನೇ ಇರಬೇಕೆ ?

ನನ್ನ ತಾಪತ್ರಯ ನಾನು ಹುಟ್ತಾನೇ ಶುರುವಾಯ್ತು ಅಂತ ಅಂದರೆ ನಿಮಗೆ ಆಶ್ಚರ್ಯವಾಗಬಹುದು. ನನ್ನನ್ನ ಈ ಲೋಕಕ್ಕೆ ಬರಮಾಡಿದಳಲ್ಲಾ—ಆ ಮಿಡ್ ವೈಫ಼—ಅವಳು ನನ್ನನ್ನ ನೋಡ್ತಾನೇ "ಒಳ್ಳೇ ಕರೀ ಕಲ್ಲಿನ ಗುಂಡಿನ ಹಾಗೆ ಇದಾನಮ್ಮ" ಅಂತ ಅಂದಳಂತೆ. ಅಲ್ಲೇ ಪಕ್ಕದ ಬೆಡ್‌ನಲ್ಲಿದ್ದ ನಮ್ಮ ಪಕ್ಕದ ಮನೆ ಪ್ರೇಮಲತಮ್ಮನವರ ಮಗು ಕಡೆ ನೋಡಿ, "ಇವನೇ ಸರಿ, ಬಿಳಿ ಕಲ್ಲಿನ ಕೃಷ್ಣ!" ಅಂತ ಹೊಗಳಿದಳಂತೆ! (ಈ ಬಿಳಿ ಕಲ್ಲಿನ ಕೃಷ್ಣ ಈಗ I.A.S. ಬೇರೆ ಮುಗಿಸಿ ಕೂತಿದಾನೆ ಅನ್ನೋದು ದುಃಖದ ವಿಷಯ ಬಿಡಿ.)

ಇಲ್ಲಿ ತನಕ ನಾನು ಹೇಳಿದ್ದು ಮುನ್ನುಡಿ. ಈ ನನ್ನ ಪ್ರಲಾಪದ ಮೊದಲನೇ ಅಧ್ಯಾಯದ ಬಿಗಿನಿಂಗ್ ಹೇಗಿದೆ ನೋಡಿ.

ಹುಟ್ಟಿದ ಅನಂತರ ಹನ್ನೊಂದನೆಯ ದಿನ ನನ್ನ ಅಪ್ಪ, ಅಮ್ಮ ನನಗೆ ನಾಮಕರಣ ಬೇರೆ ಮಾಡಿದರು. ಅವತ್ತಿನ ತನಕ ನನಗೆ ಏನು ಹೆಸರು ಇಡಬೇಕು ಅಂತ ಇಬ್ಬರೂ ಕಚ್ಚಾಡಿ ಕೊನೆಗೆ "ಬಿಳಿಗಿರಿ" ಅಂತ ನಿಶ್ಚಯ ಮಾಡಿದರಂತೆ. ನಮ್ಮ ಅಕ್ಕಪಕ್ಕದ ಮನೆಯವರೆಲ್ಲಾ, "ಹುಡುಗನಿಗೆ ಈ ಹೆಸರು ಹೊಂದುಕೊಳ್ಳೋದಿಲ್ಲ. ಅವನು ಬೆಳೆದ ಮೇಲೆ ಇದರಿಂದ ತುಂಬಾ ತೊಂದರೆಗೆ ಸಿಕ್ಕಿಹಾಕ್ಕೋತಾನೆ. ತೀರಾ ಹೀಗೆ ದುಡುಕಬೇಡಿ" ಅಂತ ಬುದ್ಧಿವಾದ ಹೇಳಿದರೂ ನನ್ನ ಅಪ್ಪ, ಅಮ್ಮ ಹಿಡಿದ ಹಟ ಬಿಡಲಿಲ್ಲವಂತೆ ನಾಮಕರಣ ನಡೆಸೇಬಿಟ್ಟರು. ಅವತ್ತು ನನ್ನ ತೊಟ್ಟಿಲು ತೂಗಿದ ಮುತ್ತೈದೆಯರು ಒಳಗೊಳಗೇ ನಗ್ತಾ ಇದ್ದರು ಅಂತ ಅಕ್ಕ ಪಕ್ಕದ ಮನೆ ಹೆಂಗಸರು ಈಗಲೂ ಜ್ಞಾಪಿಸ್ಕೋತಾರೆ!

ಸರಿ. ಹುಟ್ಟಿದ ಮೇಲೆ ಬೆಳೆಯದೇ ಇರೋದಕ್ಕೆ ಸಾಧ್ಯವೆ ? ಬೆಳೆದೆ. ಅಪ್ಪ ನನ್ನನ್ನ—ಮಿಕ್ಕೆಲಾ ಮಕ್ಕಳಿಗೂ ಮಾಡೋಹಾಗೆ—ಸ್ಕೂಲಿಗೂ ಸೇರಿಸಿದ್ರು. ಎಲ್ಲಾ ಚೆನ್ನಾಗಿಯೇ ನಡೀತಿದೆ ಅಂತ ಅಂದ್ಕೋತಿದ್ದೆ. ಅಷ್ಟರಲ್ಲೇ ಬಂತೂ ನೋಡಿ ಇಂಡಿಪೆಂಡನ್ಸ್ ಡೇ ! ಸ್ಕೂಲಿನ ಮೈದಾನದಲ್ಲಿ ಬಾವುಟ ಹಾರಿಸಿದ ಮೇಲೆ ನಮ್ಮ ಟೀಚರ್ರು (ಏನು ಬೆಳ್ಳಗಿದ್ರು ಅಂತೀರಿ) ಎಲ್ಲರಿಗೂ ಚಾಕಲೇಟ್ ಹಂಚೋದಕ್ಕೆ ನಿಂತರು. ನಾವೆಲ್ಲಾ ಅವರ ಹತ್ತಿರ ನುಗ್ಗಿದ್ವಿ. ಆಗ ಅವರು ರೇಗಿಕೊಂಡು "ಹೀಗೆ ನುಗ್ಗಿದರೆ ನಾನು ಯಾರಿಗೂ ಸ್ವೀಟ್ ಕೋಡೋದಿಲ್ಲ. ಎಲ್ಲಾ ಗಂಭೀರವಾಗಿ ಸಾಲಾಗಿ ಬನ್ನಿ. ಬಿಳೀ ಮಕ್ಕಳೆಲ್ಲಾ ಮೊದಲು ಲೈನ್‌ನಲ್ಲಿ ಬನ್ನಿ. ಕರೀ ಮಕ್ಕಳೆಲ್ಲಾ ಹಿಂದೆ ಬನ್ನಿ. ಹ್ಞಾ ! ಹಾಗೆ ! ಹಾಗೆ !!" ಅಂತ ಹೇಳೋದೇ ! ನೀವು ಸರಿಯಾಗೇ ಊಹಿಸಿದಿರಿ. ನಾನೇ ಲೈನಿನ ಕೊನೇಲಿದ್ದಿದ್ದು. ನನ್ನ ಛಾನ್ಸ್ ಬರೋ ಹೊತ್ತಿಗೆ ಸ್ವೀಟ್ಸ್ ಮುಗಿದೇ ಹೋಗಿತ್ತು.

ಅವತ್ತಿನಿಂದ ನಾನು ಕಾಲೇಜು ಅಭ್ಯಾಸ ಮುಗಿಸೋವರೆಗೂ ನನ್ನ ಕತೆ ಹೀಗೇ ಮುಂದುವರೀತು ನೋಡಿ. ಕ್ಲಾಸಿನಲ್ಲಿ ಕಪ್ಪಗಿರೋರ ಬೆಂಚು; ಕ್ಯಾಂಟೀನ್‌ನಲ್ಲಿ ಕರಿಯರ ಟೇಬಲ್; ಬಸ್ಸಿನಲ್ಲಿ 'ಲಾಸ್ಟ್ ಸೀಟು: ಟ್ರೈನಿನಲ್ಲಿ ಅಪ್ಪರ್ ಬರ್ತ್ ಓನ್ಲಿ; ಡ್ರಾಮಾಗಳಲ್ಲಿ ನೋ ಪಾರ್ಟಿಸಿಪೇಷನ್ (ಮೇಕಪ್ ಹಿಡಿಯೋಲ್ಲವಂತೆ); ಫೋಟೋ ಗ್ರಾಫ್‌ಗಳಲ್ಲಿ ನೋ ಎಕ್ಸಿಸ್ಟೆನ್ಸ್ (ನನ್ನ ಬಣ್ಣ ಕಾಂಟ್ರಾಸ್ಟ್ ಕೊಡೋಲ್ವವಂತೆ !); ಬಸ್ಸಿನಲ್ಲಿ ಪ್ರಯಾಣ ಮಾಡ್ತಿದ್ದಾಗ ಯಾರಿಗಾದರೂ ಪಿಕ್‌ಪಾಕೆಟ್ ಆದರೆ ಎಲ್ಲರೂ ಮೊದಲು ನನ್ನ ಕಡೇನೇ ನೋಡೋದು (ಕಳ್ಳರೆಲ್ಲಾ ಕಪ್ಪಗೇ ಇರ್ತಾರೈ ಅಂತೀನಿ ?) ಯಾವುದಾದರೂ ರೆಡಿಮೇಡ್ ಶಾಪ್‌ಗೆ ಹೋಗಿ ಒಂದು ಶರ್ಟನ್ನೋ, ಪ್ಯಾಂಟನ್ನೋ ಟ್ರೈ ಮಾಡಿ, ಬೇಡ ಅಂತ ಮಾಲೀಕನಿಗೆ ವಾಪಸ್ ಕೊಟ್ಟರೆ ಅವನು ಅವನ್ನ ಧೋಬಿ ತರಹ ಕೊಡವೋದು (ನನ್ನ ಬಣ್ಣ ಎಲ್ಲಿ ಅವಕ್ಕೆ ಹತ್ತಿ ಬಿಡುತ್ತೋ ಅಂತ); ಪವರ್ ಕಟ್ ಆಗಿದ್ದಾಗ ಕತ್ತಲಲ್ಲಿ ಅಂಗಡಿಯಿಂದ ಕ್ಯಾಂಡ್ಲ್‌ಗಳನ್ನ ಖರೀದಿ ಮಾಡೋಣ ಅಂತ ಹೊರಟರೆ ನನ್ನ ಫ್ರೆಂಡ್ಸ್ "ಹಲೋ, ಇನ್‌ವಿಜಿಬಲ್ ಮ್ಯಾನ್!" ಅಂತ ಕೂಗೋದು, ಹೀಗೇ ಆಗ್ತೋಯ್ತು ನನ್ನ ಜಾಯಮಾನ.

ಪದವೀಧರ ಆದರೂ ಕೆಲಸ ಬೇರೆ ಸಿಗಲಿಲ್ಲ. ಮನಸ್ಸು ಬಂದಾಗಲೆಲ್ಲಾ ಕಂಡ ಕಡೆಗೆ ಅಪ್ಲಿಕೇಶನ್ನುಗಳನ್ನ ಗುಜರಾಯಿಸಿದೆ. ಯಾವುದೋ ಒಂದು ಇಂಟರ್ ವ್ಯೂನಲ್ಲಿ ಮೊದಲನೇ ಪ್ರಶ್ನೆಗೆ (ವ್ಹಾಟೀಸ್ ಯುವರ್ ನೇಮ್?) ನಾನು "ಬಿಳಿಗಿರಿ" ಅಂತ ಹೇಳಿದಾಗ ಆ ಚೇರ್ಮನ್ನು "ಆರ್ ಯೂ ಶೂರ್?" ಅಂತ ಬೇರೆ ಕೇಳಿದ್ದ. ಇನ್ನೊಂದು ಕಡೆ ಅಪ್ಲಿಕೇಶನ್ ಫಾರಮ್ಮಿನಲ್ಲಿ Are you physically

handicapped ? ಅಂತ ಕೇಳಿದ್ದಕ್ಕೆ ನಾನು, No, but I am colourfully handicapped ಅಂತ ಬರೆದಿದ್ದೆ. ಹಾಗಾದವರು ಇಂಟರ್‌ವ್ಯೂಗೂ ಕರೀಲಿಲ್ಲ ನೋಡಿ.

ಸರಿ, ಇಂತಹ ಕಷ್ಟ ಕಾರ್ಪಣ್ಯಗಳಲ್ಲಿ ಬೇಳಿದು ಬಲಿತು ನಿಂತಿದ್ದ ನನಗೆ ಮದುವೆ ಇಲ್ಲದಿದ್ದರೆ ಆಗುತ್ತೆ ? "ಇವನಿಗೆ ಒಳ್ಳೇ ಬೆಳ್ಳಗಿರೋ ಹುಡುಗೀನೇ ತಂದ್ಕೋ ಬೇಕು" ಅಂತ ನನ್ನ ಅಮ್ಮ, ಅಪ್ಪ ಮೊಂಡು ಹಿಡಿದರು. ಅವರ ಮೊಂಡುತನ (ನಾಮಕರಣ) ಜ್ಞಾಪಕ ಇದೆ ತಾನೆ ? ಬಿಳಿ ಹುಡುಗೀರೂ ಅಲ್ಲದೆ ಕರೀ ಹುಡುಗಿ ಯರೂ ನನ್ನನ್ನ ಬೇಡಾ ಅಂತ ತಿರಸ್ಕರಿಸೋದೆ ! ಎಷ್ಟೋ ಹುಡುಗಿಯರ ಅಪ್ಪ, ಅಮ್ಮಂದಿರ ಕೈಲಿ ಬೇರೆ ಬೈಯಿಸ್ಕೊಂಡು, ಸಾಕಾಗಿ, ಕೊನೆಗೆ ನಾನೇ ವರದಕ್ಷಿಣೆ ಕೊಡ್ತೀನಿ, ಮದುವೆ ಮಾಡ್ಕೊಳ್ಳಿ ಅಂತ ಬೇಡಿದೆ. ಯಾರೂ ಒಪ್ಪಿಗೆ ಕೊಡಲಿಲ್ಲ. ನಾನು ಮದುವೆ ಆಗದೆ ಅಲೀತಿರೋದನ್ನ ನೋಡಿ, ನನ್ನ ಅಪ್ಪ—ಹೌದು, ಸೇಮ್ ಅಪ್ಪ—"ಒಳ್ಳೇ ಕರೀ ಬಸವನ ತರಹ ಮದುವೇನೂ ಇಲ್ಲದೆ ಹ್ಯಾಗೆ ಸುತ್ತುತ್ತಾ ಇವ್ನಾನೆ ನೋಡು" ಅಂತ ಈಚೀಚೆಗೆ ದಿನ ನಿತ್ಯ ಖಂಡನೇಗೂ ಇಳಿದಿದ್ದಾರೆ. ಇದರಿಂದ ನನ್ನ ಮನಸ್ಸಿನಲ್ಲಿ ಆಗುತ್ತಿರೋ ಉದ್ವೇಗವನ್ನ ಯಾರಿಗೆ ಬಣ್ಣಿಸಲಿ ? ನನ್ನ ಜೀವನ ಪರ್ಯಂತ ಬ್ರಹ್ಮಚಾರಿಯಾಗಿ ಇರೋದಲ್ಲದೆ ಕಂಡ ಕಂಡವರ ಬಾಯಲ್ಲಿ ಬಯ್ಸಿಕ್ಕೊಂಡಿರಬೇಕೆ ? ಇದು ಯಾವ ನ್ಯಾಯ ?

ಈ ಪ್ರಲಾಪವನ್ನ ಇಲ್ಲಿಯವರೆಗೂ ಸಹಾನುಭೂತಿಯಿಂದ ಅವಲೋಕನ ಮಾಡಿದ ಓದುಗರಲ್ಲಿ ಅನೇಕ ಅವಿವಾಹಿತ ತರುಣಿಯರೂ ಇದ್ದಾರೆ ಅಂತ ನನ್ನ ನಂಬಿಕೆ. ಈ ನನ್ನ ಕೊನೆಯ ವಾಕ್ಯಗಳು ಅವರಿಗೆ ಉದ್ದೇಶಿಸಿದ್ದು "ಡಿಯರ್ ಗರ್ಲ್ಸ್ ! ಮಾನವರಿಗೆ ಚರ್ಮದ ಬಣ್ಣ ಮುಖ್ಯವಲ್ಲ; ಗುಣ ಮುಖ್ಯ. ಹೊರಗಿನಿಂದ ನಾನು, ನನ್ನ ಹೃದಯ ಕಪ್ಪುಗೋಪಿಯ ಹಾಗೆ ಕಾಣಬಹುದು. ಆದರೆ ನನ್ನ ಒಳ ಹೃದಯ ಕೆಂಪು ಗುಲಾಬಿ, ಗರ್ಲ್ಸ್! ನನ್ನನ್ನ ನಂಬಿ. ಬೇಸಿಕಲಿ ನಾನು ಒಳ್ಳೇ ಮನುಷ್ಯ. ಬೇಕಾದರೆ ನೀವೇ ಖುದ್ದಾಗಿ ನನ್ನನ್ನ ಅಳತೆ ಮಾಡಿ. ಐ ಯಾಮ್ ರೆಡಿ ಫಾರ್ ಎ ಡೇಟ್. ನನಗೂ ನಿಮಗೂ ಅದೃಷ್ಟ ಖುಲಾಯಿಸಿದರೆ ಡೇಟ್ ಮೇ ಬಿಕಮ್ ಎನ್ ಎಂಗೇಜ್‌ಮೆಂಟ್ ! ಖಂಡಿತಾ ನನಗೆ ಕಾಗದ ಬರೀರಿ, ಥ್ಯಾಂಕ್ಸ್ ಎಂಡ್ ಗುಡ್ ಬೈ !!"



# ಶಬ್ದ ನಮಗೆ ದಾರಿ ನಿಮಗೆ

ಕೆ. ಎನ್ ನಾಗರಾಜ್*

ಕಂಗೆಡಿಸದಿರಿ ಪ್ರಶ್ನಿಸುವ ಹಸುಳೆಗಳನ್ನು
ಗದರಿ ಉತ್ತರಿಸದೆ ಮನ ಮುದುಡುವಂತೆ.
ಕಂಗೊಳಿಸದಿರಿ ಮುಡಿದು ಗಿಡದ ಹೂವೆಲ್ಲವನು
ಕೆಲವಾದರೂ ಮಾಗಬಿಡಿ ಎಂದಿನಂತೆ.

ಕಟ್ಟದಿರಿ ಭಾವಗಳ ಹುರಿ ಇರದ ಮಾತುಗಳ
ಹಳೆಯದೇ ಅಂಥದೇ ಗೂಡಿನಲ್ಲಿ.
ಬಿಟ್ಟುಬಿಡಿ ಬಾನತ್ತ ಸ್ವಚ್ಛಂದ ಹಕ್ಕಿಗಳನ್ನು
ಮೋದು ಮಲೆಯಲಿ ಸೊಂಪು ಕಾಡಿನಲ್ಲಿ.

ಬೈಗು ಕೆರೆಯಂಚಿನಲಿ ಬೆಳಗು ಮೈದಾನದಲಿ
ತಿರುಗಾಡುತಿರಿ ಒಂಟಿ ಸಲಗನಂತೆ.
ಅಭ್ಯಾಸವಾದರೆ ಸುಲಭ ಗಜಮುನಿಲ್ಲುವ ಯೋಗ
ಬಟ್ಟಬಯಲಾದರೂ ಅಲುಗದಂತೆ.

ಸಿದ್ಧವಾಗಿರಿ ಎಲ್ಲ ಪಂಥ ಪಯಣಗಳೆದುರೂ
ಬದ್ಧವಾಗಿಯೂ ಅಬದ್ಧಕೆಡೆಗೊಡದೆ ಬೆಳೆದು
ಒಳಗೊಂಡುಬಿಡಿ ಅಜಾಂಡದಾಚೀಚೆಗಳ
ಜೇನ ಹಂಚಲು ಜಗಕೆ ವಿವಿವ ಸವಿದೂ.

ನಿಮ್ಮ ಸೃಷ್ಟಿಗೆ ನೀವೆ ಮರುಳಾಗದಿರಿ ಜೋಕೆ
ಸಾಕ್ಷಿಯಾಗಿರಿ ಅನುಭವಕೆ ತೆರೆದು ದಾರಿ.
ತುಟಿಕಚ್ಚಿ—ತಡೆವುದಸಾಧ್ಯವಾದರು ಸರಿ
ಕಾರಿಕೊಳ್ಳುವ ಹಾಗೆ ಬರಲಿ ಲಹರಿ.

ನಾದಸಾರ್ಥಕ್ಯಕ್ಕೆ ಆನಂದವೇ ಸಾಕ್ಷಿ.
ಸತತ ಸಾಧನೆ ಕವಿಗೆ ಇನ್‌ಕ್ಯುಬೇಟರ್.
ಶ್ರುತಗಾನದುಭಿರಾಮಕರವೆ ದಿಟ
ಬಟ್ ದೋಸ್ ಅನ್‌ಹರ್ಡ್ ಆರ್ ಸ್ವೀಟರ್.

ಹೊಗಳಿದರೆ ನಾಚಿಕೊಳಿ; ಬೆನ್ನಟ್ಟಿದರೆ ಬಾಗಿ
ವಿಮರ್ಶೆಯೇ ನಿಜ ಶಬ್ದವೇಧಿ.
ಓದುಗರ ತುಟಿಯರಳೆ ನಿಮಗೆ ಸೇವಾಶುಲ್ಕ
ನೆನಪಿರಲಿ–ದೊಡ್ಡವರು ನಡೆದ(ದ್ದೆ) ಹಾದಿ.

ತೆರೆದುಬಿಡಿ ಎದೆಕಿಟಕಿ; ಮನದಕದ.
ಪಂಚೇಂದ್ರಿಯವ ಜಗದ ಸೊಗಸಿಗೆ ಕೊಡಿ.
ಕೆದಕು ನೋಟಕೆ ಲಾರಿ ಬೆನ್ನಲೂ ಇದೆ ದಾರಿ
ಶೀರ್ಷಿಕೆಯ ಮತ್ತೊಮ್ಮೆ ಓದಿ ನೋಡಿ.



# ಭಾರತ ಪ್ರವಾಸೀ ವರ್ಷ

ಶಿವು

---

ಅಂದು ಸಂಜೆ ಕ್ಲಬ್ಬಿನ ಹುಲ್ಲುಗಾವಲಿನಲ್ಲಿ ನಾವೆಲ್ಲಾ ಕೂತಿದ್ದಾಗ, ತುಂತುರು ಮಳೆ ಶುರುವಾಯಿತು. ವಿಧಿಯಿಲ್ಲದೇ ನಾವೆಲ್ಲಾ ಡೈನಿಂಗ್ ಹಾಲಿಗೆ ಓಡಿದೆವು. ಅಂದು ಜನ ಸಂಖ್ಯೆ ಕಡಿಮೆ ಇದ್ದುದರಿಂದ, ಅಲ್ಲಿದ್ದ ಕುರ್ಚಿಗಳನ್ನು ಹಾಗೆ ಹೀಗೆ ಎಳೆದು ನಾವೆಲ್ಲಾ ಸುಖಾಸೀನರಾಗಲು ಯಾವ ಅಡಚಣೆಯೂ ಇರಲಿಲ್ಲ.

"ನಿನ್ನೆ ಸಂಜೆ ಟಿ.ವಿ. ನೋಡಿದ್ರಾ?" ಅರುಣ ಎಂದಿನಂತೆ ಸಂಭಾಷಣಾ ಗೋಲಿ ಉರುಳಿಸಿದ.

"ಸಮಾಚಾರ್ ನೋಡ್ದೆ. ಸಲ್ಮಾ ಅದ್ಯಾವುದೋ ಸಾಬರ ಬಣ್ಣದ ಸೀರೆ ಉಟ್ಟಿದ್ದಳು. ಅದು ಬಿಟ್ರೆ ಇನ್ನೇನೂ ವಿಶೇಷ ಇರ್ಲಿಲ್ವಲ್ಲಾ ರೆಡ್ಡಿ ಉವಾಚ.

"ಅದಲ್ಲೋ, ಹತ್ತು ಘಂಟೆ ಮೇಲೆ ನಮ್ಮ ಪ್ರವಾಸೀ ಖಾತೆಯ ಕೇಂದ್ರ ಮಂತ್ರಿ ಮಾಧವರಾವ್ ಸಿಂಧ್ಯ ಅವರ್ನ ದೂರದರ್ಶನ ಗ್ಲಾಮರ್ ಗರ್ಲ್‌ಕೋಮಲ್ ಜಿ. ಬಿ. ಸಿಂಗ್ ಸಂದರ್ಶನ ನಡೆಸಿದ್ದು ಬಲು ಸ್ವಾರಸ್ಯವಾಗಿತು"

"ಅದೇನೋ ಅಂಥಾ ಸ್ವಾರಸ್ಯ?" ರಾಜ—ಗೋಲಿಯನ್ನು ಮುಂದೆ ನೂಕಿದ.

"ಕೋಮಲ್‌ಳ ಕೇಶವಿನ್ಯಾಸ ಗೊತ್ತಲ್ಲಾ. ಹೊರಪಾಗಿ ಬೆಳೆದಿರೋ ಕೇಶ ರಾಶಿನ ಜಟೆ, ಜಡೆ ಯಾವ್ದೂ ಕಟ್ಟಿ. ಸುಮ್ನೆ ಬೆನ್ನ ಮೇಲೆ ಇಳೀ ಬಿಟ್ಟು ನೋಟಕರಿಗೆಲ್ಲಾ ಹುಚ್ಚು ಹಿಡಿಸೋದು. ಅವಳು ಮಂತ್ರಿ ಮಹೋದಯರನ್ನು ಕುರಿತು "For a change minister, Let us let our hairs down and discuss the issues thread bare'' ಅಂತ ಅಂದಿದ್ದಕ್ಕೆ ಕಿಲಾಡಿ ಸಿಂಧ್ಯ ಏನಂದ ಗೊತ್ತೇ "It is easy for you to say Komal" ಅಂತ ಹೇಳಿ ಅವಳ ಕೂದಲನ್ನು ನೋಡಿದಾಗ. ಇದ್ದ ಗಣ್ಯರೆಲ್ಲಾ ಘೊಳ್ಳೆಂದು ನಕ್ಕಾಗ, ಕೋಮಲ್ ನಾಚಿದ್ದು ನೋಡಬೇಕಾಗಿತ್ತು" ಅಂತ ಹೇಳಿ ಅರುಣ ಭಾವಪರವಶನಾಗಿ ಸುಮ್ಮನೆ ಕೂತ.

ಆ ಸಮಯಕ್ಕೆ ಸರಿಯಾಗಿ ದೇವಾನಂದಾನಿ ಆಗಮಿಸಿದ.

"ಏನ್ರೋ ನಾನು ಬಂದ ತಕ್ಷಣ ಮಾತು ನಿಲ್ಲಿಸಿ ಬಿಟ್ರಿ. ಅರುಣ ಯಾಕೆ ಹಾಗೆ ತೇಲುಗಣ್ಣು ಮಾಡಿಕೊಂಡಿದ್ದಾನೆ. ಮೈ ಸರಿಯಾಗಿಲ್ವೆ" ದೇವು ಸಭೆಯನ್ನು ಪ್ರಶ್ನಿಸಿದ.

"ಹಾಗೇನಿಲ್ಲ ದೇವು, ಭಾರತ ಪ್ರವಾಸೀ ವರ್ಷವನ್ನು ಯಶಸ್ವಿಗೊಳಿಸಿ, ವಿದೇಶೀ ಮುದ್ರ ಗಳಿಸೋದು ಹೇಗೆ ಅಂತ ಪರ್ಯಟನ ಮಂತ್ರಾಲಯದ ಸಚಿವರೊಂದಿಗೆ ಟಿ.ವಿ.ಯಲ್ಲಿ ನಡೆದ ಚರ್ಚೆಯ ಬಗ್ಗೆ ಅರುಣ ವರದಿ ಒಪ್ಪಿಸ್ತಾ ಇದ್ದ. ನೀನು ಬಂದೆ" ಅಂತ ನಾನು ಹೇಳಿದೆ.

"ಸಾಕು ನಿಲ್ಲೋ ಶಿವು ನಿನ್ನ ಹಿಂದಿ ಮಿಶ್ರಿತ ಕನ್ನಡಾನ. ವಿದೇಶಿ ಮುದ್ರ ಅಂತೆ ಪರ್ಯಟನ ಮಂತ್ರಾಲಯ ಅಂತೆ. ತಿಳಿಗನ್ನಡದಲ್ಲಿ ಫಾರಿನ್ ಎಕ್ಸ್‌ಚೇಂಜ್, ಪ್ರವಾಸೀ ಸಚಿವಾಲಯ ಅಂತ ಹೇಳುಕ್ಕೆ ಏನೋ ಗುನುಗು ನಿನಗೆ. ನಿಮ್ಮಂಥೋರಿಂದ ಕನ್ನಡಾಂಬೆ ಉದ್ಧಾರ ಆದ ಹಾಗೇ. ಅದೇನು ಚರ್ಚೆ ಅರುಣ ಅಂಥಾ ಸ್ವಾರಸ್ಯವಾಗಿದ್ದದ್ದು?" ದೇವು ಅರುಣನನ್ನು ಕೇಳಿದ.

"ಅನು ಸೂಚಿತ ಜಾತಿ ಮತ್ತು ಜನ ಜಾತಿ ಅಂತ ಟಿ.ವಿ.ನಲ್ಲಿ ಯಾವಾಗ್ಲೂ ಹೇಳ್ತಾ ಇರ್ತಾರಲ್ಲಾ ಹಾಗಂದ್ರೇನೋ ಶಿವು?" ರಾಜ ಅಡ್ಡ ಬಾಯಿ ಹಾಕಿ, ದೇವೂನ ಕೆಣಕೋಕ್ಕೆ ನನ್ನ ಪ್ರಶ್ನೆ ಕೇಳಿದ.

"ಅವನ್ನೇನು ಕೇಳ್ತೀಯಾ, ನಾನು ಹೇಳ್ತೀನಿ ಕೇಳು. ಈ ದೇಶದಲ್ಲಿರೋದು ಎರಡೇ ಜಾತಿ. ಅಧಿಕಾರಾನೆಲ್ಲಾ ಕೈಯ್ಯಲ್ಲಿ ಇಟ್ಕೊಂಡು. ಬೇಕಾದ ಹಾಗೆ ಖರ್ಚು ಮಾಡಿಕೊಂಡು, ದಿನಾಗಲೂ ವಿದೇಶೀ ಬ್ಯಾಂಕುಗಳಿಗೆ ಹಣಾ ರವಾನಿಸ್ತಾರಲ್ಲಾ ಅವರ್ದು ಒಂದು ಜಾತಿ, ತೆರಿಗೆ ಕೊಡ್ತಾ, ಮೂಗಿಗೆ ಕವಡೆ ಕಟ್ಟಿಕೊಂಡು, ದುಡೀತಾ ಇರ್ತೀವಲ್ಲಾ ಅವರ್ದು ಇನ್ನೊಂದು ಜಾತಿ. ಎರಡ್ನೇದು ಜನ ಜಾತಿ. ಮೊದಲ್ನೇದು **Identified** ಜಾತಿ ಅಷ್ಟೆ. ಅದಿರ್ಲಿ ಅರುಣ ಸ್ವಲ್ಪ ಮಾತಾಡುಕ್ಕೆ ಬಿಡ್ತೀರಾ" ದೇವು ನನ್ನ ಪರವಾಗಿ ಉತ್ತರ ಕೊಟ್ಟಿದ್ದರ ಋಣ ತೀರಿಸುಕ್ಕೆ, ಚೇರ್‌ ಆಗ ತಾನೇ ದೇವು ಕೈಲಿ ಕೊಡುಕ್ಕೆ ಬಂದ ಬಿಲ್ಲನ್ನು ನಾನೇ ತೆಗೆದುಕೊಂಡು ರುಜು ಹಾಕಿದೆ.

"ಇನ್ನೇನಿಲ್ಲ ದೇವು, ಫಾರಿನ್ ಎಕ್ಸ್‌ಚೇಂಜ್ ಗಳಿಸೋದಕ್ಕೆ ಉತ್ತಮ ಮಾರ್ಗ ಅಂದ್ರೆ, ಅಂತರ ರಾಷ್ಟ್ರೀಯ ಪ್ರವಾಸಿಗಳನ್ನ ನಮ್ಮ ದೇಶಕ್ಕೆ ಆಕರ್ಷಿಸೋದು. ಇಂಡಿಯನ್ ಏರ್‌ಲೈನ್ಸ್‌ನ ದಕ್ಷತೆ ನೋಡಿದ ತಕ್ಷಣ ಬಂದ ಪ್ರವಾಸಿಗಳು ಹೆದರಿ ಹಿಂದಕ್ಕೆ ಹೋಗ್ತಾರೆ. ಇನ್ನು ಪ್ರವಾಸೀ ತಾಣಗಳೋ, ಯಾವಾಗ್ಲೂ ಕಿಕ್ಕಿರಿದಿರುತ್ವೆ. ಬಂದೋರ್ಗೆ ಏನು ಅನುಕೂಲ ಸಿಗುಲ್ಲ. ಏನ್ಮಾಡ್ತೀರಾ ಅಂತ ಪ್ರವಾಸೀ ಸಂಸ್ಥೆಗಳ ಮುಖಂಡರು ಸಿಂಧ್ಯಾನ ಕೇಳ್ತಾ ಇದ್ರು ಚರ್ಚೆಲಿ" ಅರುಣ ವಿಧೇಯ ಬಾಲಕನಂತೆ ಉತ್ತರಿಸಿದ.

"ಅವನೇನಂದ ಅದಕ್ಕೆ?"

"ಸಚಿವರು ಗೊತ್ತಿಲ್ವೇ, ಮಾತಿನಲ್ಲಿ ಜಾಣರು. ಪ್ರವಾಸೀ ಸ್ಥಳಗಳು ಕಿಕ್ಕಿರಿದಿದ್ದರೆ

ಅವುಗಳು ಆಗಲೇ ಸಾಕಷ್ಟು ಆಕರ್ಷಕವಾಗಿವೆ ಅಂತ ಆಯ್ತು, ಅವನ್ನ ಇನ್ನೂ ಉತ್ತಮಪಡಿಸೋ ಅವಶ್ಯಕತೆ ಏನು? ವಿಮಾನ ಸಂಸ್ಥೆ ದಕ್ಷತೆ ಉತ್ತಮಪಡಿಸೋದಕ್ಕೆ ಯೋಜನೆ ಹಾಕ್ಕೊಂಡಿದೇವೆ ಅಂತ ಹೇಳಿ ನುಣುಚಿಕೊಂಡರು"

"ನುಣುಚಿಕೊಳ್ದೇ ಏನು ಮಾಡ್ತಾರೆ, 'ಬಿ.ಜೆ.ಪಿ. ದೇಶದ್ರೋಹಿ ಘಟನೆ ಯಿಂದ್ಲೇ ಜಾರಿಕೊಂಡ ಪ್ರಭೃತಿಗೆ ಈ ಚರ್ಚೆ ಏನು ಮಹಾ?" ಅಂತ ಹೇಳಿ ದೇವು ಒಂದು ಗುಟುಕು ತೀರ್ಥ ಹೀರಿದ.

"ನೀನೇ ಪ್ರವಾಸೀ ಸಚಿವ ಆಗಿದ್ರೆ ಏನ್ಮಾಡ್ತಿದ್ದೆ ದೇವು? ಎಲ್ಲರೂ ಮಾಡೋದು ಅಷ್ಟೇ ತಾನೆ!" ಅಂತ ನಾನು ಹೇಳಿದೆ.

ದೇವು ತನ್ನ ಗಾಥೆ ಪ್ರಾರಂಭಿಸಿದ.

"ನಾನು ಸಚಿವ ಆಗಿದ್ರೆ ನನ್ನ ಧ್ಯೇಯ ಸಾಧನೆಲಿ ಒಂದು ಹೊಸ ನೈಜತೆ ತರ್ತಿದ್ದೆ. ಈಗ ನಮ್ಮ ಪ್ರವಾಸೀ ಉದ್ಯಮಾನೇ ತಗೊ. ವಿದೇಶಿ ಪ್ರವಾಸಿ ಗಳನ್ನು ಆಕರ್ಷಿಸಬೇಕಾದರೆ, ಫ್ರಾಂಕ್‌ಫರ್ಟ್, ಲಂಡನ್, ನ್ಯೂಯಾರ್ಕ್, ಪ್ಯಾರಿಸ್ ಗಳಲ್ಲಿ ಒಂದೊಂದು ಪ್ರವಾಸೀ ಕೇಂದ್ರ ತೆರೆದು, ನಮ್ಮ ದೇಶದ ಟಾಜ್‌ಮಹಲ್ ನೋಡುಕ್ಕೆ ಬನ್ನಿ, ಕಾಶ್ಮೀರದ ಹಿಮದ ಮೇಲೆ ಸ್ಕೀ ಮಾಡಿ, ಅಸ್ಸಾಮಿನ ಕಾಜಿರಂಗಾ ದಲ್ಲಿ ರೈನೋ ನೋಡಿ ಅಂತ ಕಿನ್ನರಿ ಬಾರಿಸಿದ್ರೆ, ಅವ್ರುಗಳು ಬರ್ತಾರೆ ಅಂದ್ಕೊಂಡ್ಯಾ. ಅವರುಗಳೂ ಪೇಪರ್ ಓದ್ತಾರೆ. JKLF, ULFA, LTTE ಇವೆಲ್ಲಾ ಬರೀ ಇಂಗ್ಲೀಷ್ ವರ್ಣಮಾಲೆಯ ಅಕ್ಷರಗಳು ಅಂತ ಅವ್ರೇನೂ ತಿಳಿಯೋಲ್ಲ. ಅವ್ರೆಲ್ಲಾ ನಮ್ಮ ಈ ಪವಿತ್ರ ನಾಡಿಗೆ ಹಿಂಡು ಹಿಂಡಾಗಿ ಬರಬೇಕಾದ್ರೆ, ಅವರಿಗೆ ಸಾಹಸೀ ಪ್ರವಾಸೋದ್ಯಮದ ಆಶೆ ತೋರಿಸ್ಬೇಕು. ಒಂದು ಆಕರ್ಷಕ ಬ್ರೋಷರ್ ತಯಾರಿಸಿ ಎಲ್ಲರಿಗೂ ತಲುಪಿಸೋದು ಬಹು ಮುಖ್ಯ. ಎರಡು ನಿಮಿಷ ತಾಳಿ. ನಾನು ಹೇಳ್ತಿರೋದು ಏನು ಅಂತ ಪ್ರತ್ಯಕ್ಷವಾಗಿ ತೋರಿಸ್ತೀನಿ" ಅಂತ ಹೇಳಿ ಮೇಜಿನ ಮೇಲಿದ್ದ ನ್ಯಾಪ್‌ಕಿನ್ (ಪೇಪರ್‌ದು) ಮೇಲೇನೇ, ಲಗ್ನಪತ್ರಿಕೆ ಶಾಸ್ತ್ರದಲ್ಲಿ ಶಾಸ್ತ್ರಿಗಳು ಬರೀತಾರಲ್ಲ ಹಾಗೆ ಗೀಚುಕ್ಕೆ ಶುರು ಮಾಡ್ದ. ಎರಡು ನಿಮಿಷ ಆದ ಮೇಲೆ ದೇವು ಮುಂದುವರಿಸಿದ.

"ನೋಡ್ರೊ, ಪ್ರವಾಸೀ ಬ್ರೋಷರ್‌ಗೆ ನಾನು ಸಾಹಿತ್ಯ ತಯಾರಿಸಿದ್ದೇನೆ. ಓದ್ತೀನಿ ಕೇಳಿ.

**ಬನ್ನಿ ಸಾಹಸೀ ಪ್ರವಾಸಿಗಳೇ ಬನ್ನಿ**

ಆತಂಕವಾದ ಅಂತ ಬರೀ ಪೇಪರಿನಲ್ಲಿ ಓದಿದರೆ ಆಯಿತೇ. ಅದರ ರುಚಿ ನೋಡಿ ಅನುಭವಿಸಬೇಡವೇ ? ನಾಳೆ ನಿಮ್ಮ ಮೊಮ್ಮಕ್ಕಳು ತೊಡೆ ಮೇಲೆ ಕೂತು

ಕೇಳಿದರೆ ಏನು ಹೇಳುವಿರಿ ? ಒಮ್ಮೆ ನಮ್ಮ ಪ್ಯಾಕೇಜ್ ಪ್ರವಾಸ ತೆಗೆದುಕೊಂಡರೆ ಇನ್ನು ಮೂರು ವರ್ಷ ಯಾವ ಪ್ರವಾಸಕ್ಕೂ ನೀವು ಸಿದ್ಧರಿರುವುದಿಲ್ಲ. ನಮ್ಮ ಪ್ಯಾಕೇಜ್ ನಿಮ್ಮನ್ನು ಶ್ರೀನಗರ, ಗವಹಾಟಿ, ಅಯೋಧ್ಯೆ ಹಾಗೂ ಕೊಯಮುತ್ತೂರುಗಳಿಗೆ ಕರೆದೊಯ್ಯುತ್ತದೆ. ಶ್ರೀನಗರದಲ್ಲಿ ಇಳಿದ ತಕ್ಷಣ ನಗುಮುಖದ JKLF ಯುವಕರು ನಿಮ್ಮನ್ನು ಸ್ವಾಗತಿಸಿ, ಕಣ್ಣಿಗೆ ಕಾಶ್ಮೀರೀ ರೇಷ್ಮೆಯ ಕರೀಬಟ್ಟೆಯನ್ನು ನವಿರಾಗಿ ಕಟ್ಟಿ, ನಿಮ್ಮನ್ನು ಒಂದು ರಹಸ್ಯ ಪ್ರದೇಶಕ್ಕೆ ಕರೆದೊಯ್ಯುತ್ತಾರೆ. ಅಲ್ಲಿ ಚಾಪೆಯ ಮೇಲೆ ಕುಳಿತು ನೀವೆಲ್ಲಾ ನಿಸರ್ಗ ಸೌಂದರ್ಯವನ್ನು ಸವಿಯುತ್ತಿರುವಾಗ ಭಾರತ ಸರ್ಕಾರಕ್ಕೆ ಒಂದು ತಂತಿ ಹೋಗುತ್ತದೆ. ಆಮೇಲೆ ನಿಜವಾದ, ಮೈನವಿರೇಳಿಸುವ ಸೆಣಸಾಟ. ಕೊನೆಗೆ ಆತಂಕವಾದಿಗಳು ಪುನಃ ನಿಮ್ಮ ಕಣ್ಣು ಕಟ್ಟಿ, ಶ್ರೀನಗರದ ಹೆದ್ದಾರಿಗೆ ನಿಮ್ಮನ್ನು ಬಿಡುತ್ತಾರೆ. ಅಲ್ಲಿಂದ ನೇರವಾಗಿ ನಿಮ್ಮನ್ನು ನಮ್ಮ ಪ್ರವಾಸೀ ಬಸ್ಸಿನಲ್ಲಿ ವಿಮಾನ ನಿಲ್ದಾಣಕ್ಕೆ ಕರೆದೊಯ್ದು ಅಲ್ಲಿ ಗವಹಾಟಿ ವಿಮಾನದಲ್ಲಿ ಕೂರಿಸುತ್ತಾರೆ. ಗವಹಾಟಿಯಲ್ಲಿ ನೀವು ಇಳಿದಾಗ ಎಲ್ಲವೂ ಮಾಮೂಲಾಗಿ, ಶಾಂತವಾಗಿ ಕಾಣುತ್ತದೆ. ನಿರಾಶರಾಗಬೇಡಿ. ನೀವು ಕುಳಿತಿರುವ ಟ್ಯಾಕ್ಸಿಯ ಚಾಲಕ ನಿಮ್ಮನ್ನು ಊರಿನೊಳಕ್ಕೆ ಕರೆದೊಯ್ಯುತ್ತಾನೆಂದು ತಿಳಿದಿರಾ ? ಹ್ಹ, ಹ್ಹ, ನೀವು ಹೋಗುವುದು ದುರ್ಗಮ ಕಾನನದ ನೆಲೆದಾಣವೊಂದಕ್ಕೆ, ಸುತ್ತಲೂ ಸಿಡಿಮದ್ದಿನ ಸದ್ದು. ರೈನೋ ಬದಲು ನಿಮಗೆ ಆಪರೇಷನ್ ರೈನೋ ನೋಡುವ ಸದವಕಾಶ. ನೀವು ತಂಗುವ ಗುಡಿಸಿಲಿನಲ್ಲಿ ಅನೇಕ ಭಾರತೀಯ ಪ್ರವಾಸೀ ಮಿತ್ರರನ್ನು ನೀವು ಭೇಟಿ ಮಾಡಬಹುದು. ಇವರೆಲ್ಲರೂ ಎಣ್ಣೆ ಕಂಪನಿಗಳಲ್ಲಿ ಕೆಲಸ ಮಾಡುವ ಇಂಜಿನಿಯರುಗಳೇ ಆಗಿರುತ್ತಾರಲ್ಲ ಏಕೆ ಎಂಬ ಪ್ರಶ್ನೆ ಇಲ್ಲಿ ಅಪ್ರಸ್ತುತ. ಎಣ್ಣೆ ಕಂಪನಿ ಕೆಲಸಗಾರರು ಪ್ರವಾಸ ಮಾಡಬಾರದೆಂದು ಯಾವ ಬೈಬಲ್ಲಿನಲ್ಲಿ ಹೇಳಿದೆ ? ಇಲ್ಲಿಂದ ಭಾರತ ಸರ್ಕಾರಕ್ಕೆ ತಂತಿಯೇನೂ ಹೋಗುವುದಿಲ್ಲ. ಅನಿರ್ದಿಷ್ಟ ಕಾಲದ ನಂತರ ಅಲ್ಲಿನ ಸರ್ಕಾರ ಉರುಳಿ ನಿಮ್ಮ ಬಿಡುಗಡೆ ಶತಸ್ಸಿದ್ಧ. ನಿಮ್ಮ ಬಿಡುಗಡೆಯಾದ ತಕ್ಷಣ ಅಲ್ಲಿನ ಪ್ರವಾಸೀ ಸಖಿಯರು ನಿಮ್ಮನ್ನು ಅಯೋಧ್ಯೆಯ ವಿಮಾನದಲ್ಲಿ ಹತ್ತಿಸಿ ಬಿಡುತ್ತಾರೆ.

ಅಯೋಧ್ಯೆ ! ಎಲ್ಲ ಸಾಹಸೀ ಪ್ರವಾಸಿಗಳ ಕನಸಿನ ತಾಣ. ನೂಕುನುಗ್ಗಲು, ಅನನ್ಯ ಶ್ರದ್ಧೆ, ಕೆಂಪು ಕುಂಕುಮ, ಎಲ್ಲವನ್ನೂ ಹತ್ತಿರದಿಂದ ಸವಿಯಬೇಕಾದರೆ ಅಯೋಧ್ಯೆ ಬಿಟ್ಟು ಇನ್ನೆಲ್ಲಿ. ನೀವು ಅಲ್ಲಿ ಹೋದಾಗ ನೂಕುನುಗ್ಗಲು ಇಲ್ಲದಿದ್ದರೆ, ಎರಡು ಕೈಗಳನ್ನು ಶಂಖದ ರೂಪದಲ್ಲಿ ನಿಮ್ಮ ಬಾಯಿ ಮುಂದಿಟ್ಟು 'ರಾಮ' ಎಂದು ಕೂಗಿರಿ. ನೀವು ನಿರೀಕ್ಷಿಸಿದ ಗಲಾಟೆ ಪ್ರಾರಂಭವಾಗದಿದ್ದರೆ 'ರಹೀಮ' ಎಂದು ಕೂಗಿ. ಮುಂದಿನ ಕ್ಷಣ ನೀವೆಲ್ಲಿರುವಿರೆಂದು ನಿಮಗೇ ಅರಿವಿರುವುದಿಲ್ಲ.

ನಮ್ಮ ಕೊನೆಯ ಅತಿ ಮುಖ್ಯ ಆಕರ್ಷಣೆ ಕೊಯಮತ್ತೂರಿನ ಆಯುಧಾಗಾರಗಳು. ಇಲ್ಲಿ ಅತ್ಯಾಧುನಿಕ ಆಯುಧ ಸಾಮಗ್ರಿಗಳನ್ನು ಊರಿನ ಸಂದಿಗೊಂದಿಗಳಲ್ಲಿ ತಯಾರಿಸುತ್ತಿರುವುದನ್ನು ನೀವು ನೋಡಬಹುದು.

ತಮ್ಮ ಪ್ರವಾಸವನ್ನು ಮುಂದುವರಿಸಬಯಸುವವರು ನಿಶಿರಾತ್ರಿಯಲ್ಲಿ ದೋಣಿಗಳಲ್ಲಿ ಕುಳಿತು ಜಾಫ್ನಾಗೆ ಪ್ರಯಾಣ ಮಾಡಬಹುದು.

ನಿಮ್ಮ ಯಾತ್ರೆ ಸುಖಕರವಾಗಿರಲಿ"

ದೇವು ತನ್ನ ಬ್ರೋಷರ್ ಕರಡನ್ನು ಓದಿ ಮುಗಿಸಿದ.

"ದೇವೂ, ನಿನ್ನ ಯೋಜನೆಯೇನೋ ಸರಿಯಾಗಿದೆ. ಆದರೆ ಸ್ವಲ್ಪ ಹಳೆಯದಾಯ್ತೇನೋ ಅನ್ನಿಸುತ್ತೆ. ನಮ್ಮ ಪ್ರವಾಸೋದ್ಯಮ ಇಲಾಖೆಯವರು ಅಂತಹ ಪ್ರಚಾರ ಕೊಡದೇ ಇದನ್ನೆಲ್ಲಾ ಆಗಲೇ ಜಾರಿಗೆ ತಂದಿದ್ದಾರೆ, ಹಣ ಮಾತ್ರ ಸರ್ಕಾರದ ಕೈಸೇರದೆ, ಆತಂಕವಾದಿಗಳ ಕೈ ಸೇರ್ತಾ ಇದೆ" ಅಂದ ರೆಡ್ಡಿ.

"ಈವಾಗಿನ್ನೇನಾಗ್ತಾ ಇದೆ ಅಂತ ತಿಳಿದಿದ್ದೀಯ, ಸರ್ಕಾರ ಗಳಿಸ್ತಾ ಇರೋ "ವಿದೇಶೀ ಮುದ್ರೆ" ಎಲ್ಲ ನಮ್ಮ ಖಜಾನೆ ಸೇರುತ್ತೆ ಅಂದ್ಕೊಂಡಿದ್ದೀಯಾ ? ತಿಮಿಂಗಿಲಗಳೆಲ್ಲಾ ಬೇಕಾದೋರಿಗೆ ಅಮದು ಪರವಾನಗಿ ಕೊಟ್ಟು, ಅದನ್ನೆಲ್ಲಾ ಪರದೇಶಗಳಿಗೆ ನಾಗಿಸ್ತಾ ಇದ್ದಾರಲ್ಲಾ, ಆತಂಕವಾದ ಆದ್ರೆ ಏನು ಈತಂಕವಾದ ಆದ್ರೆ ಏನು ಖಜಾನೆ ಹೇಗಿದ್ರೂ ಖಾಲಿತಾನೆ" ಅಂದ ದೇವು.



ಪುಟ್ಟ ರಮೇಶ ಊರಿನಿಂದ ಮೊದಲ ಬಾರಿಗೆ ಹಳ್ಳಿಗೆ ಬಂದಿದ್ದ. ಅಜ್ಜಿ ಮನೆ ಮುಂದೆ ನಿಂತಿದ್ದ ಕುರಿ ಮರಿ ಅವನ ಕುತೂಹಲವನ್ನು ಕೆಣಕಿತು. ಹತ್ತಿರ ಹೋದ ಕುರಿ ಮರಿಯ ಮೈ ತಡವಿದ. ಅನಂತರ ಸಂತೋಷದಿಂದ ಕೂಗಿದ "ಅಮ್ಮಾ ಅಮ್ಮಾ ಈ ಪ್ರಾಣಿನ ಕಂಬ್ಳೀ ಇಂದ ಮಾಡಿದ್ದಾರೆ ನೋಡಮ್ಮಾ"

# ಹೀಗಾದರೆ ಹೇಗೆ?!!

ಆ.ರಾ.ಸೇ.

---

ಒಲ್ಲೆವು ನಮ್ಮಾವರಾಟದ ತರಹ
ಕೈ ಅವಲಕ್ಷಣ ಆದೆ ಹಣೆಬರಹ
ಕ್ರಿಕೆಟ್ಟು ಹಾಗೆ ಫುಟ್‌ಬಾಲ್ ಹೀಗೆ
ಬ್ಯಾಡ್ಮಿಂಟನ್ ಉದುರಿದ ಒಣಸೋಗೆ
ಓಟದಿ ಬರಿಕುಂಟುವರಿವರೆಲ್ಲ
ಕೊನೆಯು ಜಾಗ ಇದ್ದೇ ಇದೆಯಲ್ಲ
ಹಾಕಿ ಇರುವುದೇ ಹಾಕಿಸಿಕೊಳ್ಳಲು
ಎಂದಿದ್ದೆವು ನಾವು
ಆಜ್ಲಾನ್ ಟ್ರೋಫಿಯ ಹೊಡೆದೇ ಬಿಟ್ಟೆವು
ಇದಿರಾಳಿಗೆ ಬಡಿದಿತು ರಾವು
ನಾಳೆ ಚೆಸ್ಸಿನಲಿ ಗೆದ್ದೇ ಬಿಡುವನೊ
ಜಯಲಕ್ಷ್ಮಿಯ ಸೆರಗನು ಹಿಡಿದೆಳೆವನೊ,
ಹೇಗಾದರು ಸರಿ ಎನ್ನುತಲಿದ್ದೆವು
ಹೀಗಾದರೆ ಹೇಗೆ (೧)

ನೀಲಾಕಾಶದಿ ಹಾರುವ ಹಕ್ಕಿ
ಕಂಬನಿ ಸುರಿಸಿತು ಅತ್ತಿತು ಬಿಕ್ಕಿ
ಧೃವಮಂಡಲದಲಿ ಥಳಿಥಳಿಸಿತ್ತು
ಏರಿದ ಬೆಲೆಗಳ ಮೂಗಿನ ನತ್ತು
ಜೋಳ ಎಣ್ಣೆ ಸ್ವರ್ಗಕೆ ನೇರಿದವು
ಮನದ ಸುಖವ ಚಿಂತೆಗೆ ಮಾರಿದವು
ಟೊಮ್ಯಾಟೊ ಮೂವತ್ತನು ಮುಟ್ಟೀತೆ
ಎಂಬ ಸಂತೆ ಚಿಂತೆಯಲಿರೆ ನಾನು
ಬರಿ ಹತ್ತಕೆ ಅದು ಸಿಗಬಹುದೇನು
ಹೇಗಾದರು ಸರಿ ಎನ್ನುತಲಿದ್ದೆನು
ಹೀಗಾದರೆ ಹೇಗೆ (೨)

ಯಾರೂ ಗೋಲ್‌ಮಾಲ್ ಮಾಡಲಿ ಇಲ್ಲ
ಯಾರೂ ಲಂಚವ ಕಬಳಿಸಲಿಲ್ಲ
ಆಡಳಿತದಿ ಕೊಂಚವು ಸಡಿಲಿಲ್ಲ
ಅಖಂಡ ರಾಷ್ಟ್ರಕೆ ಭಂಗವೆ ಇಲ್ಲ

ರೂಪಾಯಿ ಬೆಲೆ ಸ್ವಲ್ಪವು ಕುಗ್ಗಿಲ್ಲ
(ಡಾಲರ್ ಬಹಳ ದುಬಾರಿ)
ಚಿನ್ನವು ಇಲ್ಲೇ ಇದ್ದು ಬೇಸತ್ತು
ಹೊರಟಿದೆ ಜಂಬೋ ಸವಾರಿ
ಎಲ್ಲವು ಸೊಗಸಾಗಿದೆ ಸರಿಯಾಗಿದೆ
ಹಬ್ಬಿತೇಕೆ ದುರ್ವಾತ
ಬ್ಯಾಲೆನ್ಸ್ ಆಫ್ ಟ್ರೇಡ್ ಪೇಮೆಂಟು
ಹೊಡೆಯಿತೇಕೆ ಗೋತಾ
ಹೇಗಾದರು ಸರಿ ಎನ್ನುತಲಿದ್ದರೆ
ಹೀಗಾದರೆ ಹೇಗೆ (೩)

ನನ್ನ ತೂಕ ಕೇವಲ ಅರವತ್ತು
ಚಂದ್ರನಲ್ಲಿ ಹತ್ತೇ ಕೇಜಿ
ನನ್ನ ಆದಾಯ ಕಡಿಮೆಯಾಗಿಲ್ಲ
ಮಾರ್ಕೆಟ್ ಬಲು ತೇಜಿ
ಹೋದ ವರ್ಷ ಬೊಬ್ಬೆಯ ಹೊಡೆದಿದ್ದೆ
ಸ್ಥಳೀಯ ಕವಿಯೇ ನಾನು
ಗಲ್ಲಿಯ ಸಿಲ್ಲೀ ಕವಿಯಲ್ಲೇನು
ಕಾವ್ಯವೆ ಹೊಕ್ಕಿದೆ ಕಾನು
ಒಪ್ಪಿಗೆ ಪಡೆಯದೆ ಹೆಸರು ಹಾಕಿದರು
ಬಂದು ಹೊಕ್ಕೆ ಕವಿಗೋಷ್ಠಿಯ ಬೋನು
ಹೇಗಾದರು ಸರಿ ಎನ್ನುತಲಿದ್ದೆನು
ಹೀಗಾದರೆ ಹೇಗೆ (೪)

ಮಾಸ್ತಿ ಎಂದರೆ ಕನ್ನಡದಾಸ್ತಿ
ಜ್ಞಾನಪೀಠ ನೀಡಿತ್ತು ಪ್ರಶಸ್ತಿ
ಆದರೆ ಧಾರಾವಾಹಿಗೆ ನಾಸ್ತಿ
ಇದೆ ಅಲ್ಲವೆ ಸರಿಯೆನಿಸುವ ಧೋರಣೆ
ಲೋಕವು ಪ್ರತಿಭೆಗೆ ಕಟ್ಟಿದ ಧಾರಣೆ
ಆದರು ನಡೆದಿದೆ ಶತಮಾನೋತ್ಸವ
ಹಿರಿಮೆಗೆ ಸಂದ ಪುರಸ್ಕಾರೋತ್ಸವ
ಹೇಗಾದರು ಸರಿ ಎನ್ನುತಲಿದ್ದೆವು
ಹೀಗಾದರೆ ಹೇಗೆ (೫)



# ನ್ಯೂಯಾರ್ಕರ್ ವ್ಯಂಗ್ಯ ಚಿತ್ರಗಳು

ನ್ಯೂಯಾರ್ಕರ್ ಅಮೆರಿಕದ ಸುಪ್ರಸಿದ್ಧ ಹಾಸ್ಯಪತ್ರಿಕೆ ಈ ಪತ್ರಿಕೆಯ ವ್ಯಂಗ್ಯ ಚಿತ್ರಗಳೂ ಅಷ್ಟೇ ಹೆಸರುವಾಸಿ. ಇವುಗಳಲ್ಲಿ ಹಲವನ್ನು ಅಪರಂಜಿ ಓದುಗರಿಗೆ ಪರಿಚಯಿಸುವ ಸಲುವಾಗಿ ಮುಂದಿನ ಪುಟಗಳಲ್ಲಿ ಕೊಟ್ಟಿದೆ. ವ್ಯಂಗ್ಯಚಿತ್ರಗಳಿಗೆ ವಿವರಣೆ ಕೊಡುವುದು ಮಹಾಪಾತಕ ಅಂತ ಕೈಲಾಸಂ ಹೇಳ್ತಾ ಇದ್ರು. ಆದರೂ ಕೆಳಗಿನ ಚಿತ್ರದ ಬಗ್ಗೆ ಒಂದೆರಡು ಮಾತು. ಜಪಾನಿನಲ್ಲಿ ಜೆನ್ ಬುದ್ಧಿಸಂ ಅನುಯಾಯಿಗಳು ತ್ಯಾಗಶೀಲರು. ಎಲ್ಲ ಪ್ರಾಪಂಚಿಕ ಆಸೆಗಳನ್ನು ತೊರೆದು. ಖಾಲಿ ಕೊಠಡಿಯಲ್ಲಿ ಕುಳಿತು, ಎಲೆಗಳಿಲ್ಲದ ಗಿಡವೊಂದನ್ನು ಮುಂದೆ ಇರಿಸಿಕೊಂಡು ಅದನ್ನೇ ಕುರಿತು ಧ್ಯಾನಮಾಡಿ ಸಾಕ್ಷಾತ್ಕಾರ ಪಡೆಯುವುದು ಅವರ ಜೀವನ ಧ್ಯೇಯ. ಅಂತಹ ಧ್ಯಾನಾಸಕ್ತ ದಂಪತಿಗಳ ನಡುವಿನ ಸಂಭಾಷಣೆ ಇದು, ಮಿಕ್ಕ ವ್ಯಂಗ ಚಿತ್ರಗಳನ್ನು ನೋಡಿ, ತಿಳಿದು, ಆನಂದಿಸುವ ಸ್ವಾತಂತ್ರ್ಯವನ್ನು ನಿಮಗೇ ಬಿಟ್ಟಿದೆ.



"ನಮ್ಮಕ್ಕನ ಮನೇಲಿ ಎರಡು ಪಾಟ್ ಇದೆ"

ನ್ಯೂಯಾರ್ಕರ್ ವ್ಯಂಗ್ಯ ಚಿತ್ರಗಳು :





" HONEY ! I'M HOME ! "

ನ್ಯೂಯಾರ್ಕರ್ ವ್ಯಂಗ್ಯ ಚಿತ್ರಗಳು :





"HONEY! I'M HOME!"

ನ್ಯೂಯಾರ್ಕರ್ ವ್ಯಂಗ್ಯ ಚಿತ್ರಗಳು :

“ಮುಂದೇನು ಅಂದ್ಯಾ ? ಮುಂದೇನೂ ಇಲ್ಲ. ಇದೇ”

“ಹೌದು ! ನಾನೂ ಹಿಂದೆ ಇಟ್ಟಿದ್ದೆ.
ಆಗ ಚಿನ್ನದ ಬೆಲೆ 180 ರೂ. ಇತ್ತಮ್ಮ”.

27

# ಶ್ವಾನ ಗ್ರಹಣದ ಒಂದು ಪ್ರಕರಣ

ಕಂಭಂ. ಕೃಷ್ಣಮೂರ್ತಿ

ವೆಂಕಮ್ಮನ ಮಗ ಗುಂಡನಿಗೆ, ನಾಯಿ ಕಚ್ಚಿದ ಸುದ್ದಿ ಕಾಳ್ಗಿಚ್ಚಿನಂತೆ ಕೇರಿಯಲ್ಲೆಲ್ಲಾ ಪರಡಿತು. ನಾಯಿ ಕಚ್ಚಿತೋ ಅಥವಾ ಪರಿಚಿತೋ? ಯಾವ ನಾಯಿ ಕಚ್ಚಿದ್ದು. ಹುಚ್ಚು ನಾಯಿಯೋ ಅಥವಾ ಹುಚ್ಚಿಲ್ಲದ ನಾಯಿಯೆ? ಅದರ ಜಾತಿ ಯಾವುದು ಅದು ಕ್ರಾಸ್ ಬ್ರೀಡೆ? ಕಂತ್ರಿಯೇ? ನೂರಾರು ಪ್ರಶ್ನೆಗಳು. ವೆಂಕಮ್ಮನ ಮನೆಗೆ, ಕೇರಿಯ ಜನ, ಸಾಯಿಬಾಬ ಮಠಕ್ಕೆ ನುಗ್ಗುವಂತೆ ನುಗ್ಗಿದರು. ಗುಂಡ ಕೈಗೊಂದು ತುಂಡು ಬಟ್ಟೆಯನ್ನು ಕಟ್ಟಿಕೊಂಡು, ಮಂಚದ ಮೇಲೆ ಪವಡಿಸಿ, ತಾರಸಿಯೆಡೆಗೆ ಶೂನ್ಯ ದೃಷ್ಟಿಯನ್ನು ಬೀರಿದ್ದ.

"ಏನಾಯ್ತು ವೆಂಕಮ್ಮನೋರೆ, ಯಾವ ನಾಯಿ ಕಡಿದದ್ದು? ಅದರ ಕಿವಿ ಹ್ಯಾಗಿತ್ತು. ಕಣ್ಣುಗಳು ಕೆಂಪಗಿತ್ತೆ? ಬಾಲ ದೊಡ್ಡದಾಗಿತ್ತೆ? ಯಾಕಂದ್ರೆ ನಾಯಿ ಗಳಲ್ಲಿ ಹಲವಾರು ಜಾತಿಗಳಿರುತ್ತೆ ಕಣ್ರಮ್ಮಾ ಎಂದು ಪಶು ವೈದ್ಯ ಹನುಮಂತ ರಾಯರು, ಪ್ರಶ್ನೆಗಳ ಮಾಲೆಯನ್ನೇ ಹಾಕಿದರು.

"ಅದರ ಜಾತಿ ಹ್ಯಾಂಗ ತಿಳ್ಕೊಳ್ಳಿ ನಾನು. ಅದೇನು ನಾಮ ಇಟ್ಕೊಳುತ್ತೆ ವಿಭೂತಿ ಬಳ್ಕೊಳತ್ತೆ?" ಮೂಢಮತಿಯಂತೆ ಕೇಳಿದಳು ವೆಂಕಮ್ಮ.

"ಹಂಗಲ್ಲಮ್ಮ, ನಾಯಿ ಕಚ್ಚಿದಾಗ, ಅದರ ಜಾತೀನ ತಿಳ್ಕೊಳೋದು ಮುಖ್ಯ ನೋಡಿ. ಅದು ಹುಚ್ಚು ನಾಯಿ ಅಲ್ಲ ತಾನೆ? ಯಾಕಂದ್ರೆ ಹುಚ್ಚು ನಾಯಿ ಕಡಿದ್ರೆ, ಇಪತ್ತುನಾಲ್ಕು ಸೂಜಿ ಹಾಕ್ಬೇಕಾಗುತ್ತೆ ನೋಡಿ"

"ಯಾರಿಗೆ ಗೊತ್ತಪ್ಪ, ಯಾವ್ದೋ ನಾಯಿ ಬೀದೀಲಿ ಹೋಗ್ತಿತ್ತು. ಇವ ಅದಕ್ಕೆ ಬಿಸ್ಕತ್ತು ತಿನ್ನಿಸ್ತಿನಂತ ಹೋದ!. ಅಮ್ಮಾ ನಾಯಿ ಕೈಗೆ ಬಾಯಿ ಹಾಕ್ತೂಂತ ಓಡಿ ಬಂದ. ಅದಕ್ಕೆ ನಾನು ಬಿಸಿ ಬಿಸಿ ರಾಗಿ ಹಿಟ್ಟಿನ ಪೋಲ್ಟೀಸ್ ಮಾಡಿ ಅವನ ಕೈಗೆ ಕಟ್ಟಿ ಮಲಗಿಸಿದೆ.

"ಅಯ್ಯೋ ಹಾಗೆಲ್ಲಾ ಮಾಡಬಾರ್ದು ಕಣ್ರಮ್ಮಾ. ನಾಯಿ ಕಡಿದ ಜಾಗಾನ ಶುದ್ದಿ ಮಾಡಿ, ಸೂಜಿ ಹಾಕ್ಬೇಕೂ. ನೀವ್ಯಾಕೆ ನಂಗೆ ಮುಂಚೇನೆ ಹೇಳಿ ಕಳಿಸಲಿಲ್ಲ" ಎಂದು ಅನಿಮಲ್ ಹಸ್ಬೆಂಡರಿ ಹನುಮಂತರಾಯರು ಹಾರಾಡಿದರು. ಎಲ್ಲಿ ನಿಮ್ಮ ಹುಡುಗನ್ನ ಸ್ವಲ್ಪ ಹಿಡ್ಕೊಳ್ಳಿ, ಇವನ ಕೈಗೆ ಕಟ್ಟಿರೋ ಬಟ್ಟೇನ ಬಿಚ್ಕೋಣ" ಎಂದು

ಪಶು ವೈದ್ಯರು ಮುಂದಾದಾಗ, "ಊಂ ನಂಗೆ ಸೂಜಿ ಬ್ಯಾಡ.... ನಾನೊಲ್ಲೆ....
ಎಂದು ಗುಂಡ ಕೈಎಳೆದಾಗ, ವೈದ್ಯರು ಹಾಕಿಕೊಂಡಿದ್ದ ಕನ್ನಡಕಕ್ಕೆ ಏಟು ತಗುಲಿ ಅದು ಹಾರಿ ಕೆಳಗೆ ಬಿತ್ತು. ಅವರು ಕಣ್ಣು ಕಾಣದೆ ತಡವರಿಸಿದರು. ವೆಂಕಮ್ಮನೇ ಅವರ ಮುರಿದ ಕನ್ನಡಕವನ್ನು ತೆಗೆದುಕೊಟ್ಟ ಮೇಲೆ ಅದನ್ನು ಮೂಗಿನ ಮೇಲೆ ಕೂರಿಸಿಕೊಂಡರು. ಅವರಿಗೆ ಮುರಿದ ಗಾಜಿನೊಳಗಿಂದ ಗುಂಡ, ಎರಡೆರ ಡಾಗಿ ಕಂಡ. "ಮೊದಲು, ಕೈನೋಡಿ ಬಿಡೋಣ. ಗಾಯ ಎಷ್ಟಾಗಿದೆ ಅಂಬೋದನ್ನ ಮೊದ್ಲು ಪತ್ತೆ ಹಿಡೀಬೇಕು", ಎಂದು ಹನುಮಂತರಾಯರು, ವೆಂಕಮ್ಮ ಗಾಯಕ್ಕೆ ಕಟ್ಟಿದ ಬಟ್ಟೆಯ ಗಂಟನ್ನು ಬಿಚ್ಚಲು ತಿಣಕಾಡಿದರೂ ಸಾಧ್ಯವಾಗಲಿಲ್ಲ. ವೆಂಕಮ್ಮನೇ ಅವರ ಅವಸ್ಥೆ ನೋಡಲಾಗದೆ, ತಾನು ಹಾಕಿದ ಆ ಬ್ರಹ್ಮಗಂಟನ್ನು ಬಿಚ್ಚಿದಳು. ತಕ್ಷಣ ರಾಗಿಯ ಹಿಟ್ಟು. ದೋಸೆಯಂತೆ ಕೈಮೇಲೆಲ್ಲಾ ಹರಡಿ, ಹನುಮಂತರಾಯರ ಕೋಟಿಗೂ ಪ್ರೋಕ್ಷಣೆಯಾಯಿತು. ಗುಂಡನ ಕೈಮೇಲೆಲ್ಲಾ ಮೆತ್ತಿಕೊಂಡಿದ್ದ ಹಿಟ್ಟಿನಿಂದಾಗಿ, ಗಾಯ ಎಲ್ಲಾಗಿದೆ ಎಂಬುದೇ ವೈದ್ಯರಿಗೆ ತಿಳಿಯಲಿಲ್ಲ.

"ವೆಂಕಮ್ಮನವರೆ, ನೀವು ನಿಮ್ಮ ಮಗನ ಕೈನೋಡ್ದಾಗ ರಕ್ತ ಏನಾರ ಬರ್‍ತಿತ್ತೆ· ಹಲ್ಲೂರಿದ ಗುರ್ತು ಏನಾರ ಕಾಣ್ತೆ ?"

"ಅಯ್ಯೋ ಅದ್ನೆಲ್ಲಾ ಯಾರು ನೋಡ್ತಾರಪ್ಪ, ಗುಂಡ ಬಂದು, ನಾಯಿ ಮೂತಿ ಕೈಗೆ ತಾಕ್ತು ಅಂದ. ತಕ್ಷಣ ನಾನು ಒಂದು ಪಾವು ರಾಗಿ ಹಿಟ್ಟನ್ನ ಬಿಸಿ ಮಾಡಿ ಪೋಲ್ಟೀಸ್ ಹಾಕಿ, ಕಟ್ಟಿದೆ. ಹಿತವಾಗಿದೆ ಅಂತ ಹೇಳಿ–ಅವ ಸೂರು ನೋಡ್ತಾ ಬಿದ್ಕೊಂಡ"

"ವೆಂಕಮ್ಮಾ ನಿನಗೆ ನಾಯಿ ಸಹವಾಸ ಇನ್ನೂ ಗೊತ್ತಿಲ್ಲ. ನಾನು ಪಶುವೈದ್ಯ ನನಗೆ ಗೊತ್ತು. ಇನ್ಮುಂದೆ, ನಿಮ್ಮ ಮಗನಿಗೆ ಕಚ್ಚಿದ ನಾಯೀನ. ನೀವು ಕಣ್ಣಲ್ಲಿ ಕಣ್ಣಿಟ್ಟುಕೊಂಡು ನೋಡ್ತಿರಬೇಕು. ಇನ್ನೂ ಇಪ್ಪತ್ತೈದು ದಿವಸಗಳು ನೋಡ್ತಲೇ ಇರ್ಬೇಕು. ಆಮೇಲೆ ಆ ನಾಯಿಗೆ ಹುಚ್ಚು ಹಿಡಿದ್ರೆ, ಗುಂಡನಿಗೂ ಹುಚ್ಚು ಹಿಡಿಯುತ್ತೆ. ಇದು ಖಾತ್ರಿ. ಅದಕ್ಕೆ ನಾನು ಈಗ್ಲೆ ಹೋಗಿ, ಮನುಷ್ಯ ಡಾಕ್ಟ್ರು ಕುಲಕರ್ಣಿಗಳಿಗೆ ಹೇಳಿ, ಅವರ್ನೇ ಕಳಿಸ್ತೀನಿ. ಉದಾಸೀನ ಮಾಡೋ ಕೇಸಲ್ಲಾಮ್ಮ ಇದು" ಎಂದು ಹೇಳಿ ದುಡ ದುಡನೇ ನಡೆದೇ ಬಿಟ್ಟರು ಹನುಮಂತ್ರಾಯ್ರು.

ವೈದ್ಯ ಕುಲಕರ್ಣಿಯವರು, ತಮ್ಮ ಹಡಪವನ್ನು ಹೊತ್ತುಕೊಂಡು ಬರಲು ತಡವಾಗಲಿಲ್ಲ. ಕೆಳಕ್ಕೆ ಜಾರುತ್ತಿದ್ದ ತಮ್ಮ ದೊಗಲೆ ಪ್ಯಾಂಟನ್ನು ಮೇಲಕ್ಕೆಳೆದು ಕೊಳ್ಳುತ್ತಾ, ಮೂರೂವರೆ ಅಡ್ಡಿ ಎತ್ತರದ ವೈದ್ಯ ಶಿಖಾಮಣಿಗಳು, ಗುಂಡಪ್ಪ ಮಲಗಿದ್ದ ಕೊರಡಿಯೆಡೆಗೆ ಧಾವಿಸಿದರು. ತಮ್ಮ ಕತ್ತಿನಲ್ಲಿ ಮಾಲೆಯಾಗಿ ಹಾಕಿ ಕೊಂಡಿದ್ದ, ಸ್ಟೆತಾಸ್ಕೋಪನ್ನು ಅವನ ಮೈಮೇಲೆಲ್ಲಾ ಇಟ್ಟು ನೋಡಿದರು.

ಒಂದೆರಡು ಕಡೆ. ಕೈಯಿಂದ ದೇಹವನ್ನು ಕುಟ್ಟಿ, ಶಬ್ದವನ್ನಾಲಿಸಿದರು. ಗುಂಡನ ಕಣ್ಣುಗಳನ್ನು ಹಿಗ್ಗಲಿಸಿ ನೋಡಿದರು. ಗುಂಡನಿಗೆ "ಆ" ಎಂದು ಬಾಯನ್ನು ತೆರೆ ಯುವಂತೆ ಹೇಳಿ, ನಾಲಿಗೆಯನ್ನೆಳೆದು ಪರೀಕ್ಷಿಸಿದರು. ಅವನ ರಟ್ಟೆಗೆ ಬಟ್ಟೆಯನ್ನು ಕಟ್ಟಿ ಬ್ಲಡ್ ಪ್ರೆಷರನ್ನೆಳೆದರು. ಥರ್ಮಾಮೀಟರನ್ನು ಅವನ ಬಾಯಿಗೆ ತುರುಕಿ, ತಮ್ಮ ಮಣಿಕಟ್ಟಿಗೆ ಹಾಕಿಕೊಂಡಿದ್ದ ಗಡಿಯಾರವನ್ನು ನೋಡುತ್ತಾ ಕೂತರು, ಮನುಷ್ಯ ವೈದ್ಯ ಕುಲಕರ್ಣಿಗಳು. ಇಷ್ಟು ಹೊತ್ತಾದರೂ, ಬರೀ ಪರೀಕ್ಷೆಯನ್ನೇ ಮಾಡುತ್ತಿದ್ದುದು ನೋಡಿ, ಆವರಿಗೇನೆಂದು ತಿಳಿಯಲಿಲ್ಲವೇನೋ ಎಂದುಕೊಂಡು, "ಅವನಿಗೆ ನಾಯಿ ಕಚ್ಚಿದೆ ಡಾಕ್ಟ್ರೆ ಎಂದಳು ವೆಂಕಮ್ಮ.

"ಆ ಪ್ರಸಂಗ ತಿಳೀತರಿ ಅಕ್ಕಾವ್ರೆ. ಆ ಪಶು ವೈದ್ಯ ಹನುಮಂತ್ರಾಯ ಹೋಗೂ ಮುಂದ, ನನಗೆ ಹೇಳಿ ಹೋಗ್ಯಾನ್ರಿ. ಆದ್ರೆ ಅವ ಹೇಳಿ ಹೋಗ್ಯಾನೆಂತ' ನಾನು ಸೂಜಿ ಹಾಕೋಕೆ ಬರೂಲ್ರಿ ಅಕ್ಕಾವ್ರೆ ಕ್ರಮಬದ್ಧ ತಪಾಸಣೆಯಿಲ್ಲದೆ, ನಾನು ಏನೂ ಹೇಳೂನಲ್ಲ ನೋಡ್ರಿ ಮತ್ತ, ನಾಳೆ ಮುಂಜಾನೆ ಮಲ ಮೂತ್ರದ ತಪಾಸಣೆ ಆಗ್ಬೇಕ್ರಿ. ರಕ್ತದ ತಪಾಸಣೆಯೂ ಆಗ್ಬೇಕ್ರಿ, ಕಾರ್ಡಿಯಾಲಜಿಸ್ಟ್, ಅಣ್ಣಾರಾವ್ ಸಾಹೇಬ್ರಿಗೆ, ಒಂದು ಪತ್ರ ಬರಕೊಡ್ತೀನ್ರಿ. ಅವರಿಂದ, ಹೃದಯ ಪರೀಕ್ಷೆ ಮಾಡಿ ಸ್ಕೊಂಡು ಬರ್ರಿ. ನ್ಯೂರಾಲಜಿಸ್ಟ್, ದೇಶಪಾಂಡೆಯವರೂ ಒಂದು ಪತ್ರ ಬರ್ಕೊಡ್ತೀನ್ರಿ. ಅವರಿಂದಾನು ಒಂದು ರಿಪೋರ್ಟ್ ತಗಂಬರ್ರಿಯಕ್ಕ... ಎಂದು ವೈದ್ಯರು ಹೇಳುತ್ತಾ ಹೋದರು. ಸಧ್ಯ ಹುಚ್ಚಾಸ್ಪತ್ರೆ ಗೆ ಹೋಗಿ, ಅಲ್ಲಿಂದಲೂ ಒಂದು ರಿಪೋರ್ಟ್ ತರುವಂತೆ ಹೇಳಿದಿದ್ದುದು, ಎಂಕಮ್ಮನ ಪುಣ್ಯ.

"ನಾಯಿ ಕಚ್ಚಿದ ಅವನ ಕೈ ನೋಡೂಲ್ವೆ?" ಎಂದು ಎಂಕಮ್ಮ ಪ್ರಶ್ನಿಸಿದಾಗ, "ಅದೆಲ್ಲಾ ಮುಖ್ಯವಲ್ಲಾ ಅಕ್ಕಾವ್ರೆ. ಮೊದ್ಲು ತಪಾಸಣೆ ರಿಪೋರ್ಟುಗಳನ್ನು ನನ್ನ ದವಾಖಾನೆಗೆ ತರ್‍ರಿ ಮುಂದೆ ನೋಡೋಣು" ಎಂದು ಹೇಳಿ ಕುಲಕರ್ಣಿಗಳು, ತಾವು ಹರಡಿದ್ದ ತಮ್ಮ ಸಾಮಾನು ಸರಂಜಾಮುಗಳನ್ನು. ಹಡಪಕ್ಕೆ ಮತ್ತೆ ತುರುಕಿಕೊಂಡು. ತಮ್ಮ ಫೀಯನ್ನು ವಸೂಲು ಮಾಡಿಕೊಂಡು ನಡದೇ ಬಿಟ್ಟರು, ಇದೇಂಥಾ ವೈದ್ಯಕೀಯ?" ಎಂದು ಚಿಂತಿತರಾದರು ಎಂಕಮ್ಮ.

"ನಮ್ಮ ಗುಂಡಪ್ಪನಿಗೆ ಶ್ವಾನದಂಷ್ಟ್ರನವಾದ ಸುದ್ದಿ. ಕಿವೀ ಮ್ಯಾಗೆ ಬಿತ್ತು. ಅದಕ್ಕೇ ವಿಚಾರಿಸೋಣಾಂತ ಬಂದೆ" ಎಂದು ಬ್ರಾಹ್ಮಣಾರ್ಥದ ಊಟ ಮುಗಿಸಿ, ಊದಿದ ಉದರವನ್ನು ಹೊತ್ತುಕೊಂಡು, ಅವ್ವಾವಧಾನಿ ಕೃಷ್ಣಾಚಾರ್ರು ಆಗಮಿಸಿ ದರು. "ಏನಾತು, ಎಲ್ಲಾತು, ಹೇಗಾತು, ಯಾಕಾತು?" ಎಲ್ಲಾ ಪ್ರಶ್ನೆಗಳನ್ನು ಒಟ್ಟಿಗೆ ಒಗೆದು, ಉತ್ತರಕ್ಕಾಗಿ ಕಾದು ಕೂತರು.

"ಯಾವುದೋ ನಾಯಿ ಮುಂಡೇದು. ಗುಂಡನ ಕೈಗೆ ಬಾಯಿ ಹಾಕಿದೆ. ಅಷ್ಟೇಯೇ.... ಎಂದು ಎಂಕಮ್ಮ ಹೇಳಿದಾಗ, ಕೃಷ್ಣಾಚಾರ್ರು ಹೌಹಾರಿದರು.

"ಹಾಂಗೆಲ್ಲಾ ಉದಾಸೀನ ಮಾಡೋಹಾಂಗಿಲ್ಲಾ ಎಂಕಮ್ಮ, ನಾಯಿ ಅಂದ್ರೇನು ಹುಡುಗಾಟವೆ. ಒಂದು ಮಂಡಲದೊಳಗೆ, ಹುಚ್ಚು ಹಿಡಿದಾತು ಕಣಮ್ಮಾ. ಗುಂಡಪ್ಪನಿಗೆ ಈಗ ದೆಸೆ ಸರಿಯಿಲ್ಲ. ಶನಿಯ ವಕ್ರ ದೃಷ್ಟಿ ಬಿದ್ದದೆ, ಗುರು ಬಲವಾಗಿಲ್ಲ. ಶಾಂತಿ ಮಾಡಿಸಿ ಅಂತ ಹೇಳಿದ್ದೆ. ನೀವು ನನ್ನ ಮಾತನ್ನ ಕಿವಿಮ್ಯಾಗೆ ಹಾಕ್ಕೊಳಿಲ್ಲ. ಈಗ ತಾನೆ ತಲೆ ಹೋಗೋದೇನದೆ. ನಾಳೆಯಲ್ಲ ನಾಡಿದ್ದು, ಪಸಂದು ಲಗ್ನ ಅದೆ. ದತ್ತಾತ್ರೇಯ ಹೋಮ ಮಾಡಿ ಶಾಂತಿ ಮಾಡಿದ್ರಾತು. ಈ ಕುತ್ತು ನಿವಾರಣಾ ಆದ ಹಾಂಗೆ. ದತ್ತಾತ್ರೇಯನೇ ನಿಮ್ಮ ಗುಂಡನ್ನ ಕಾಡ್ಲಿಕ್ಕೆ ಪ್ರಾರಂಭ ಮಾಡಿದಾನೇಂತ ನಮ್ಮ ಅಂಬೋಣ, ನೀವೇನಂತೀರಿ....?"

ಎಂಕಮ್ಮ ಏನಾದರೂ ಹೇಳುವ ಮೊದಲೇ, ಕೊಠಡಿಯ ಒಳಗಿಂದ ಗುಂಡಪ್ಪ 'ಲಬೋ ಲಬೋ' ಹೊಡೆದುಕೊಂಡ. ಸಾವಿರಾರು ರೂಪಾಯಿಗಳನ್ನು ಕೃಷ್ಣಾಚಾರಿಗೆ ಸುರಿದು, ಹಲವಾರು ಶಾಂತಿ, ಹೋಮಗಳನ್ನು ಈಗಾಗಲೇ ಮಾಡಿಸಿದ್ದರೂ, ನಿರ್ದಿಷ್ಟ ಫಲ ದೊರೆತಿರಲಿಲ್ಲ. ಗುಂಡನಿಗೆ ಈಗ ಶಾಂತಿ ಹೋಮ ಎಂದರೆ, ವಾಂತಿ, ವಾಕರಿಕೆ ಬರುವಂತಾಗಿತ್ತು. ತನ್ನ ತಾಯಿ ವೃಥಾ ಇದಕ್ಕೆಲ್ಲಾ ಖರ್ಚು ಮಾಡುತ್ತಾಳಲ್ಲ ಎಂಬ ಸಂಕಟದಿಂದಲೇ ಗುಂಡ ಲಬೊ ಲಬೋ ಮಾಡಿದ್ದ.

"ಯಾಕೆ ಗುಂಡಪ್ಪ ಹೀಂಗ ಆಡ್ತಾ ಅದಾನೆ. ಹುಚ್ಚು ನಾಯಿ ಕಡಿದು, ಇವ ಹುಚ್ಚ ಆಗಿಯೇ ಹೋದನೆ? ಹಾಗಿದ್ದರೆ ದತ್ತಾತ್ರೇಯ ಹೋಮದ ಗತಿ?" ಅಷ್ಟಾವಧಾನಿಗಳು ಯೋಚಿಸಿ, ಆದಷ್ಟು ಅರ್ಜಂಟಾಗಿಯೇ ಹೋಮವನ್ನು ಮಾಡಿ ಮುಗಿಸಬೇಕೆಂದುಕೊಂಡರು.

"ನೋಡಿದ್ರಾ, ಈಗ್ಲೆ ಹ್ಯಾಂಗ ಆಡ್ತಿದಾನೆ, ಇನ್ನೂ ವಿಕೋಪಕ್ಕೆ ತಿರುಗಿದರೂ ಹೇಳೊಕೆ ಬರೂಲ್ಲ. ನಾಳೀನೆ ಹೋಮ ಮುಗಿಸಿಬಿಡೋಣು. ನಾನೇ ಎಲ್ಲಾ ಸಾಮಗ್ರೀನೂ ತರ್ತೀನಿ. ನೀವು ಅದರ ಯೋಚನಾ ಮಾಡ ಬ್ಯಾಡಿ ಎಂಕಮ್ಮ, ಖರ್ಚಿಗೆ ಒಂದು ಐನೂರು ರೂಪಾಯಿ ಕಳ್ಳಿರಿ, ಮುಂದೆ ನೋಡೋಣಂತೆ.... ಎಂದು ಕೃಷ್ಣಾಚಾರ್ರು ಹೇಳುತ್ತಿದ್ದಂತೆ, ಗುಂಡ ಕೈ ಕಾಲುಗಳನ್ನು ಬದರಿ, ವಿಕಾರವಾಗಿ ಕೂಗಿದ. ಅವನು ಮೆಲ್ಲಗೆ ಹಾಸಿಗೆಯಿಂದೇಳುವ ಪ್ರಯತ್ನ ಮಾಡಿದಾಗ, ಆಚಾರ್ಯರು ಹಿಂದಕ್ಕೆ ಹಾರಿದರು. "ಹುಚ್ಚು ಹಿಡಿದ ಗುಂಡ, ತಮ್ಮನ್ನೆಲ್ಲಿ ಕಚ್ಚುವನೋ" ಎಂಬ ಭೀತಿಯಿಂದ ಕಂಗಾಲಾದರು. "ಎಂಕಮ್ಮಾ ದತ್ತಾತ್ರೇಯ ಹೋಮದ ವಿಷಯ ಅಪ್ಯಾಲೆ ಮಾಡೋಣು, ಮೊದ್ಲು ಗುಂಡಪ್ಪ ಹಾಸಿಗೆಯಿಂದ, ಏಳದ ಹಾಂಗ ನೋಡ್ಕೊಳ್ರಿ... ಎಂದು ಒಂದೇ ಓಟದಿಂದ, ಹೊರಗೋಡಿದರು. "ನೀನು ಹೋಮ ಗೀಮ ಅಂತ ಸುಮ್ನೆ ಖರ್ಚು ಮಾಡ್ಬೇಡಾಮ, ನನಗೇನು ಆಗಿಲ್ಲ. ನೀನು ಧೈರ್ಯವಾಗಿರು" ಅಂತ ಗುಂಡ ಹೇಳಿದಾಗ ಎಂಕಮ್ಮನಿಗೆ ಏನೂ ತೋಚದಂತಾಯಿತು.

"ಲೇ ವೆಂಕೂ, ಏನೇ ಅದು ಹಗರಣ. ಆ ಅಜಾರಿ ಯಾಕೆ ಹಾಂಗೆ ಓಡಿ ಹೋದ, ಏನಾತೆ ವೆಂಕೂ... ಸಾವಂತ್ರಕ್ಕ ಹೊರಗಿನಿಂದಲೇ ಕೂಗುತ್ತಾ ಒಳ ಬಂದರು.

"ಏನೂ ಇಲ್ಲಿ ಸಾವಂತ್ರಕ್ಕ. ನಮ್ಮ ಗುಂಡ ಬೀದಿನಾಯ್ಗೆ ಬಿಸ್ಕೀಟು ಹಾಕೋಕೆ ಹೋದ. ಅದು ಇವನ ಕೈಗೆ ಬಾಯಿಡ್ತಂತೆ... ಎಂಕಮ್ಮ ವಿವರಿಸಿದರು.

"ಅಯ್ಯೋ ಅನ್ನ ಇಟ್ಕೋರ್‍ಗೆ ಕಚ್ಚೋ ಕಾಲ ಬಂತಲ್ಲೇ ವೆಂಕು. ಹಿಂದೆ ಮನುಷ್ಯರ ಬುದ್ದಿ ಹಾಂಗಿತ್ತು. ಈಗ ನಾಯಿಗಳ್ಗೂ ಅಂಥಾ ಕೆಟ್ಟ ಬುದ್ದಿ ಬಂತಲ್ಲೇ. ಅಂದ್ಹಾಗೆ, ಆ ಮುಂಡೆಗಂಡ, ಮೆಣಶಿನಕಾಯಿ, ಹಿಡ್ಕೊಂಡು ಸುತ್ತಾನಲ್ಲಾ, ಆ ದ್ರಾಬೆ ನಾಯಿ, ಅದೇನಾರ ಕಚ್ತೇನೂ ? ಅದ್ಕೆ ಬರೀ ಹಲ್ಲಲ್ಲಾ ಮೈಯೆಲ್ಲಾ ವಿಷ ಇದೆ. ಹುಷಾರು....

"ಇಲ್ಲಾ ಸಾವಂತ್ರಕ್ಕ ಯಾವ್ದೊ ಬಿಡಾಡಿ ನಾಯಂತೆ....

"ಹೂ.... ಏನು ಕರ್ಮಾನೋ ಇವನು ತಾನೇ ಅದಕ್ಕೆ ಬಿಸ್ಕೀಟು ಕೊಡೋಕೆ ಯಾಕೆ ಹೋದ? ಯಾವ್ದಕ್ಕೂ ಹುಷಾರಾಗಿ ನೋಡ್ಕೋ. ಆ ಮೇಲಿಂದ ಒರ್‍ತೀನಿ... ಎಂದು ಹೇಳಿ ಸಾವಂತ್ರಕ್ಕ ಮನೆಗೆ ಮರಳಿದರು.

ಕೆಂಡ ಪತ್ರಿಕೆಯ ವರದಿಗಾರ ಕೋದಂಡುವಿನದೆ ಒಂದು ಸ್ಪೆಷಲ್ ಅಪ್ರೋಚು. ವಿಷಯುವನ್ನು ಅವನು ಮಂಥನ ಮಾಡಿದ ರೀತಿಯೇ ಬೇರೆ. "ಗುಂಡಪ್ಪನವರೇ, ನಿಮಗೆ ನಾಯಿಕಚ್ಚಿದ್ದಕ್ಕೆ ಮುನಿಸಿಪಾಲಿಟಿಯವರೇ ಹೊಣೆಗಾರರು. ಅವರೇನು ಕಡ್ಲೆಕಾಯಿ ತಿಂತಾ ಕೂತಿದ್ದಾರೇನು. ಒಬ್ಬ ಪ್ರಜೆಗೆ ಹುಚ್ಚು ನಾಯಿಂದ ರಕ್ಷಣೆ ಸಿಕ್ಕದಿದ್ದರೆ ಇಂತಹ ಸರ್ಕಾರ ಇನ್ನೇನು ಸಾಧಿಸಲಿಕ್ಕೆ ಸಾಧ್ಯ. ಸ್ವತಂತ್ರ ಭಾರತದಲ್ಲಿ ಒಬ್ಬ ಜನ ಸಾಮಾನ್ಯ, ಬೀದಿಯಲ್ಲಿ ಓಡಾಡುವುದೂ ತಪ್ಪೆ. ಉದಾರತೆಯಿಂದ ಬಿಸ್ಕತ್ತು ಕೊಡುವುದೂ ತಪ್ಪೆ. ಇಲ್ಲಾ ಈ ವ್ಯವಸ್ಥೆಯೇ ಬದಲಾಗಬೇಕು. ಜನ ಜಾಗ್ರತಿ ಯಾಗಬೇಕು. ಈ ಆಡಳಿತ ವ್ಯವಸ್ಥೆಗೆ ಧಿಕ್ಕಾರ....

ಎಂಕಮ್ಮನವರಿಗಾಗಲಿ, ಕಾಲೇಜು ಓದಿದ ಗುಂಡನಿಗೆ ಆಗಲಿ, ಕೋದಂಡು ಯಾಕೆ ಬಡಬಡಿಸುತ್ತಿದ್ದಾನೆ ಎಂಬುದೇ ಅರ್ಥವಾಗಲಿಲ್ಲ.

"ನೀವು ಯೋಚನೆ ಮಾಡಬೇಡಿ. ನಮ್ಮ ಕೂಗು ಮಂತ್ರಿಗಳ ಕಿವಿಗೂ ಮುಟ್ಟಬೇಕು. ನಮ್ಮ ಪತ್ರಿಕೆಯಲ್ಲಿ ಈ ವಿಷಯ ಬರೆದು ಕೋಲಾಹಲ ಎಬ್ಬಿಸ್ತೀನಿ ನೋಡಿ.... ಎಂದು, ತನ್ನ ಜೋಳಿಗೆಯನ್ನು ಬಗಲಿಗೇರಿಸಿ, ಹೊರಟೇಬಿಟ್ಟ.

ಮಾರನೆಯ ದಿನವೇ 'ಕೆಂಡ' ಪತ್ರಿಕೆಯಲ್ಲಿ ಕೆಂಡದುಂಡೆಗಳಂತೆ, ದಪ್ಪ ಅಕ್ಷರದಲ್ಲಿ, ಮುನಿಲಿಪಾಲಿಟಿಯ ಶ್ವಾನ ಗ್ರಹಣ ದಳದ ಅಸಮರ್ಥತೆ, ಅಸಹಕಾರ

ಉದಾಸೀನಗಳ ಬಗ್ಗೆ ವರದಿ ಬಂದೇಬಿಟ್ಟಿತು. ಮುನಿಸಿಪಾಲಿಟಿಯವರಿಗೂ ಅದೇನೋ ಅರ್ಜಂಟು. ಒಂದು ವಿಶೇಷ ಸಭೆಯನ್ನು ಕೂಡಿಸಿಯೇ ಬಿಟ್ಟರು. ಬೇರೆಲ್ಲಾ ಪ್ರಮುಖ, ವಿಷಯಗಳನ್ನು ಪ್ರಬಲ ಸಮಸ್ಯೆಗಳನ್ನೂ ಬದಿಗೊತ್ತಿ ಶ್ವಾನ ಸಂಹಾರದ ವಿಷಯವಾಗಿ, ವಿಪುಲವಾಗಿ ಚರ್ಚೆ ನಡೆಸಿದರು. ಇದರ ಫಲವಾಗಿ, ನಾಯಿ ಬೋನಿರುವ ಮುನಿಸಿಪಾಲಿಟಿ ಗಾಡಿಯೊಂದು, ತಕ್ಕ ಸಿಬ್ಬಂದಿ ವರ್ಗದೊಂದಿಗೆ, ನೂರ ಹನ್ನೊಂದನೇ ಕ್ರಾಸು ಮತ್ತು ಅದರ ಪ್ಯಾರೆಲಲ್ ಕ್ರಾಸುಗಳಲ್ಲೆಲ್ಲಾ ಸಂಚರಿಸಿತು. ಫುಟ್‌ಪಾತ್ ವ್ಯಾಪಾರಿಗಳು, ಮುನಿಸಿಪಾಲಿಟಿ ವ್ಯಾನನ್ನು ನೋಡುತ್ತಿದ್ದಂತೆಯೇ, ತಮ್ಮ ಸರಕುಗಳನ್ನು ಹೊತ್ತುಕೊಂಡು, ಓಡಿಹೋಗಿ, ಅವಿಸಿಕೊಳ್ಳುವಂತೆ, ರಸ್ತೆಯಲ್ಲಿ ತಿರುಗುತ್ತಿದ್ದ ಬಿಡಾಡಿ ನಾಯಿಗಳು, ಬೋನಿನ ಗಾಡಿಯನ್ನು ನೋಡಿದ ಕೂಡಲೆ, ಓಡಿಹೋಗಿ ಎಲ್ಲೋ ಅವಿಸಿಕೊಂಡವು. ಹಗ್ಗವನ್ನು ಹಿಡಿದು. ಅವುಗಳನ್ನು ಅಟ್ಟಿಸಿಕೊಂಡು ಓಡಿದ ಸಿಬ್ಬಂದಿ ವರ್ಗದವರು ಒಂದು ನಾಯಿಯೂ ಕೈಗೆ ಸಿಕ್ಕದೆ ಏದುಸಿರು ಬಿಡುತ್ತಾ ಕುಳಿತರು. ಈ ಶ್ವಾನ ಗ್ರಹಣದ ದೃಶ್ಯವನ್ನು ನೋಡಲು ಕೇರಿಯ ಮಂದಿ ಬೀದಿಯಲ್ಲಿ ಜಮಾಯಿಸಿದರು.

ಸಾಮಾನ್ಯವಾಗಿ, ಬೇಸಿಗೆಯಲ್ಲಿ ನಾಯಿಗಳಿಗೆ ಹುಚ್ಚು ಹಿಡಿಯುತ್ತಿದ್ದುದರಿಂದ ಆಗ, ಕತ್ತಿನ ಪಟ್ಟಿಯಿಲ್ಲದೆ, ಬೀದಿಯಲ್ಲಿ ತಿರುಗುವ ಬಿಡಾಡಿ ಶುನಕಗಳನ್ನು ಹಿಡಿದುಕೊಂಡು ಹೋಗುತ್ತಿದ್ದುದು, ಮುನಿಸಿಪಾಲಿಟಿಯವರ ಪದ್ಧತಿ. ಆದರೆ ಬೇಸಿಗೆಗೆ ಮೂರು ತಿಂಗಳ ಮುಂಚೆಯೇ ಈ ಕಾರ್ಯಕ್ರಮವನ್ನು ಹಂಚಿಕೊಂಡ ಮುನಿಸಿಪಾಲಿಟಿಯ ಈ ಕಾರ್ಯದಕ್ಷತೆಗೆ, ಜನ ಮೂಗಿನ ಮೇಲೆ ಬೆರಳಿಟ್ಟುಕೊಂಡರು. ಕೋದಂಡು "ತನ್ನ ಲೇಖನದಿಂದಲೇ ಜನ ಜಾಗೃತಿಯಾಗಿದೆ" ಎಂದು ನಂಬಿಕೊಂಡು ಜಂಭದ ಕೋಳಿಯಂತೆ, ವ್ಯಾನಿನ ಹಿಂಬದಿಯಲ್ಲಿ ಓಡಾಡಿದ.

ಮುಂಜಾನೆಯಿಂದ ಸಂಜೆಯವರೆಗೆ ಸುತ್ತಿದರೂ, ಒಂದು ಶುನಕನೂ, ತಮ್ಮ ಬಲೆಗೆ ಬೀಳದಿದ್ದುದನ್ನು ಕಂಡು, ಮುನಿಸಿಪಾಲ್ಟಿಯ ಸಿಬ್ಬಂದಿ ವರ್ಗಕ್ಕೆ ಅತೀವ ನಿರಾಶೆಯಾಯಿತು. ಯಾರೋ ಅವರಿಗೆ, ವಿಶ್ರಾಂತಯಾಮಿಕಾಧಿಕಾರಿ, ಮೆಣಸಿನಕಾಯಿಯವರ ಮನೆಯಲ್ಲಿ ಕಂತ್ರಿ ನಾಯೊಂದು ಇರುವ ವಿಷಯ ತಿಳಿಸಿದರು. ವಿಷಯ ತಿಳಿದ ತಕ್ಷಣ ನಾಗಾಲೋಟದಿಂದ ಅವರ ಮನೆಗೆ ಓಡಿದರು. ಭಾವಿಗೆ ಕಟ್ಟುವ ಹಗ್ಗವನ್ನು ಕುನ್ನಿಯ ಕುತ್ತಿಗೆಗೆ ಬಿಗಿದು ಕಿಟಕಿಯ ಸರಳಿಗೆ ಕಟ್ಟಿದ್ದರು. ಮುನಿಸಿಪಾಲ್ಟಿ ಸಿಬ್ಬಂದಿ ವರ್ಗವನ್ನು ನೋಡಿದ ಕೂಡಲೇ, ಕುನ್ನಿ, ಆಕಾಶದ ಕಡೆಗೆ ಮೂತಿ ಮಾಡಿ, ಓ ಎಂದು ರೋಧಿಸಿತು. ಅದರ ಗೋಳಾಟವನ್ನು ಕೇಳಿದ ಮೆಣಸಿನ ಕಾಯಿಯವರು ಓಡಿಯೇ ಬಂದರು.

"ಏನ್ರಪಾ, ನನ್ನ ಯಾರೂಂತ ತಿಳಿದೀರಿ ? ನನ್ನ ನಾಯಿ ತಂಟೆಗೆ, ಬಂದ್ರೆ. ನೆಟ್ಟಗಾಗೊಲ್ಲ ನೋಡ್ರಿಯಪಾ. ನಮ್ಮ ಕಲ್ಯಾಣ ಮಂತ್ರಿ ಉಳ್ಳಾಗೆಡ್ಡಿಯವರ ಕಿವಿಮ್ಯಾಗೆ ಒಂದು ಮಾತು ಬಿಗೆದಾಂದ್ರೆ ನಿಮ್ಮನ್ನೆಲ್ಲಾ ಎತ್ತಂಗಡಿ ಮಾಡದೆ ಇರೂದಿಲ್ಲ ನೋಡ್ರಿ" ಎಂದು ಆರ್ಭಟಿಸಿದರು.

"ನಾವು ನಿಮ್ಮನ್ನ ಇಡಕೊಂಡು ಓಗೋಕೆ ಬಂದಿಲ್ಲ ಬುದ್ದಿ. ನಿಮ್ಮ ನಾಯನ್ನ ಇಡ್ಕೊಂಡು ಓಗ್ತೀವಿ ಅಷ್ಟೆ" ಎಂದು ಮುಂದೆ ನುಗ್ಗಿದರು.

"ಅದ್ಯಾಕೆ ಇಡ್ಕೊಂಡು ಹೋಗೋಕೆ ಹತ್ತೀರಿ. ಅದೇನು ನಿಮ್ಮ ತಲೀಮ್ಯಾಲೆ ಮೆಣಸನ್ನ ಅರದೈತಾ ಹೇಳ್ರಿ ?"

"ನಮ್ಗೆ ಮ್ಯಾಲಿಂದ ಆಲ್ಡರ್ ಅಗೈತೆ ಬುದ್ದಿ. ಹುಚ್ಚು ನಾಯಿಗೋಳ್ನ ಇಡ ಕೊಂಡು ಬರ್ರೀಂತ ಅದ್ಕೆ ಬಂದ್ವಿ....

"ನನ್ನ ನಾಯಿಗೆ. ನನ್ನ ಟೈಗರ್ಗೆ ಹುಚ್ಚು. ಹ್ಹ ಹ್ಹ ಹ್ಹಾ ಖರೇ ಅಂದ್ರೆ ನಿಮಗೇ ಬುದ್ದಿ ನೆಟ್ಟಗಿಲ್ಲಾಂತಾತು...· ಎಂದು ಹುಚ್ಚರಂತೆ ಹಾರಾಡಿದರು ಮೆಣಶಿನ ಕಾಯಿ

"ಹಾಗಲ್ಲಾ ಬುದ್ದಿ ನಾಯಿ ಕಡಿದರೆ. ಹುಚ್ಚು ಹಿಡೀಬಹುದೂಂತ"

"ಕಡೀಲಿಕ್ಕೆ ಹಲ್ಲು ಇರಲಿಕ್ಕೆ ಬ್ಯಾಡೇನು?"

"ಬೇಕು"

"ಹಾಂಗ ಬರ್ರಿ ಹಾದೀಗೆ. ನಮ್ಮ ಟೈಗರ್ಗೆ ಹಲ್ಲಿದ್ಯಾಂತ ನೀವೇ ನೋಡ್ರಿ ಮತ್ತ" ಎಂದು ಊಳಿಟ್ಟು ಸುಸ್ತಾಗಿ, ಪೆಚ್ಚಾಗಿ. ನಿಂತಿದ್ದ ಟೈಗರಿನ, ಬಾಯಿಯನ್ನು ಹಿಗ್ಗಲಿಸಿ ತೋರಿಸಿದರು ಮೆಣಶಿನಕಾಯಿ. ಎಲ್ಲಾ ಹಲ್ಲುಗಳೂ ಉದುರಿ ಹೋಗಿದ್ದ ಆ ಮುದಿ ನಾಯಿ ಕುಯಿ ಗುಟ್ಟಿತು. "ಆ ಮೂಲಿ ಮನಿ ಸಾವಂತ್ರಿಕ್ಕನ ಬಾಯಿ ಇದ್ದ ಹಾಂಗೆ ಇದರ ಬಾಯಿ ಆದೇರಿ. ಇದ್ಯಾರ್ಗೆ ಹಿಂಸಾ ಮಾಡ್ತದೆ ಹೇಳ್ರಿ ಇದರ ಗೊಡವಿ ನಿಮಗೆ ಬ್ಯಾಡ್ರಿಯಪಾ" ಎಂದು ಹೇಳಿ ದಂತ ಶೂನ್ಯವಾಗಿದ್ದ ಟೈಗರನ್ನು. ತಲೆ ಸವರಿ ಒಳಗೊಯ್ದರು.

ದಂತ ಶೂನ್ಯ ಶುನಕನನ್ನು ಹಿಡಿದೊಯ್ಯಲು, ಕಾನೂನು ಇದೆಯೆ, ಇಲ್ಲವೆ? ಸಮಸ್ಯೆಗೆ ಪರಿಹಾರ ಸಿಕ್ಕದೆ. ಸಿಬ್ಬಂದಿ ವರ್ಗ ನಿಷ್ಕ್ರಮಿಸಿತು. ಸಿಕ್ಕಿದ ಒಂದು ಶುನಕನೂ, ಈ ರೀತಿ ಕಳಚಿಕೊಂಡ ಮೇಲೆ. ತಾವು ತಮ್ಮ ಮೇಲಧಿಕಾರಿಗಳಿಗೆ ಯಾವ ರೀತಿ ಸಮಜಾಯಿಷಿ ಕೊಡುವುದು ಎನ್ನುವುದೇ ಅವರುಗಳಿಗೆ ಯೋಚನೆಯಾಯಿತು. ಆಗ ಚರಂಡಿಯಲ್ಲಿ ಬಿದ್ದುಕೊಂಡಿದ್ದ ನಾಲ್ಕು ನಾಯಿ ಮರಿಗಳು ಅವರುಗಳ ಕಣ್ಣಿಗೆ ಬಿದ್ದವು. ಅದನ್ನೇ ಎತ್ತಿಕೊಂಡು ಗಾಡಿಯಲ್ಲಿ ಹಾಕಿದರು. ತಮ್ಮ ಕೆಲಸ ಪೂರೈಸಿ ತೆಂಬ ಪೂರ್ಣ ಹರ್ಷದೊಂದಿಗೆ ಶ್ವಾನ ಗ್ರಹಣದಳ ಮುನಿಸಿಪಾಲ್ಟಿಗೆ ಮರಳಿತು.



# ವಿದೇಶಿ ಕನ್ನಡಿಗನ ಕೊರಗು

ರಾಜಾರಾಮ್ ಕಾವಳೆ

ಆಂಗ್ಲ ಮಾಧ್ಯಮವೇ ಬೇಕೆಂದ
ಆಂಗ್ಲ ಭಾಷೆಯು ಬಲು ಚಂದ
ಆಂಗ್ಲ ನಾಡಲಿ ಬಂದು ನೆಲೆಸಿ
"ಕನ್ನಡ" "ಕನ್ನಡ" ಎಂದು ಕೊರಗಿದನಾ ವಿದೇಶೀ ಕನ್ನಡಿಗ

ದುಡಿದು ಗಳಿಸಿದ ಹಣವ ಕಸಿವನಾ ಕಂದಾಯದಾರ
ಕೊಡುವನಾ ಹಣವ ದುಡಿಯದವಗೆ
ದುಡಿದವನು ಸೋತ ದುಡಿಯದವ ಗೆದ್ದ
ಇದಾವ ನ್ಯಾಯವೆಂದು ಕೊರಗಿದನಾ ವಿದೇಶೀ ಕನ್ನಡಿಗ

ಕೈಯಲ್ಲಿ ಕಾಸಿದ್ದರೇನು, ?
ಮನೆಗೆರಡು ಕಾರಿದ್ದರೇನು ?
ದುಡಿದು ದಣಿವಿ ಮನೆಗೆ ಬರಲ್
ಪೋಗಿರುವಳಾ ಸತಿ ಕೆಲಸಕೆ
ಎನಗಿನ್ನು ತಂಗಳೇ ಗತಿಯೆಂದು ಕೊರಗಿದನಾ ವಿದೇಶಿ ಕನ್ನಡಿಗ

ಮೈಕ್ರೋವೇವ್ ಬೇಕೆಂದ
ಕಾಂಪ್ಯಾಕ್ಸ್ ಡಿಸ್ಕ್ ಬಲು ಚೆಂದ
ಕಾರ್ಡಿ[1]ನಲಿದನೆಲವ ಕೊಳ್ಳಲ್
ಕಾರ್ಡಿಗನು ಬಂದೆಳೆದಾಗ
ಕೀಲು ಮುರಿದಂತೆ ಕೊರಗಿದನಾ ವಿದೇಶೀ ಕನ್ನಡಿಗ

---

1 ಕಾರ್ಡಿನಲಿ = ಕ್ರೆಡಿಟ್ ಕಾರ್ಡಿನಲ್ಲಿ
ಕಾರ್ಡಿಗನು = ಕ್ರೆಡಿಟ್ ಕಾರ್ಡ್ ಕಂಪೆನಿ.

ಅಪ್ಪ ಅರಸಗೆ ಮಂತ್ರಿ
ಮಾವ ಪಾಳಯಗಾರ
ಬೀದಿಯಲಿ ನಡೆಯುತಿರಲ್
ಪಾಕಿ[2]ನೀನೆಂಬುವರು
ನಾನೇಕೆ ಇಲ್ಲಿರುವೆ ಎಂದು
ಕೊಗಿದನಾ ವಿದೇಶೀ ಕನ್ನಡಿಗ.

---

2 ಪಾಕಿ = ಪಾಕಿಸ್ತಾನಿ.

# ಬನ್ನಿ! ಕಲಿಸೋಣ, ಒಂದಿಷ್ಟು ಸಾಧಿಸೋಣ

ವಿಜಯ ಸಚ್ಚಿದಾನಂದ

"ಸಾಧಿಸಬೇಕು ಮರಿ! ಜೀವನದಲ್ಲಿ ಏನಾದರೂ ಸಾಧಿಸಬೇಕು!" ಅಂತ ನಾನು ನನ್ನ ಮಗ ಏಳು ವರ್ಷದ ಮರಿಗೆ ಬೋಧಿಸುತ್ತಿದ್ದೆ. ಮರಿ ಹೌದೆನ್ನುವಂತೆ ತಲೆಯಾಡಿಸುತ್ತಾ ಆರನೆಯ ಕೋಡುಬಳೆಯನ್ನು ಮುರಿದು ಬಾಯಿಗೆ ಎಸೆದುಕೊಂಡ. ಅಷ್ಟರಲ್ಲಿ ಒಳಗಿನಿಂದ ಅರ್ಧ ಗೊಗ್ಗರ ಧ್ವನಿಯೊಂದು ಅಬ್ಬರಿಸಿತು. "ಕೇಳೋ ಮರಿ! ಅವರೇನೇನು ಜೀವನದಲ್ಲಿ ಸಾಧಿಸಿದ್ದಾರೇಂತ!" ಮರಿ ಏಳನೇಯ ಕೋಡು ಬಳೆಗೆ ಕೈ ಹಾಕುತ್ತಾ ನನಗೆ ಸವಾಲೆಸೆಯುವವನಂತೆ ನೋಡಿದ. ಹಾಗೆ ಅಬ್ಬರಿಸಿದ್ದು ಬೇರೆ ಯಾರೂ ಅಲ್ಲ. ನನ್ನ ಮೊದಲ ಕುಮಾರ ಕಂಠೀರವ ರವಿ. ಅವನು ನಮ್ಮ ಮರಿಗಿಂತ ಎಂಟು ವರ್ಷ ದೊಡ್ಡವನು. ಸಿನಿಮಾದಲ್ಲಿನ ಅಮಿತಾಭ್‌ಬಚ್ಚನ್ ತರಹ Angry young man. ಅವನ ಸ್ವಭಾವವನ್ನು ಎರಡೇ ಪದಗಳಲ್ಲಿ ಹೇಳಬಹುದಾದರೆ "Ever angry" ಈವಾಗ ಅವನೇನೋ ಒಂದು ತರಹ ಅರ್ಥವಾಗದ Difficult phaseನಲ್ಲಿದ್ದಾನೆ. ಅದಕ್ಕೆ ಹಾಗಾಡ್ತಾನೆ. ಆಮೇಲೆ ಸರಿ ಹೋಗ್ತಾನೆ ಅಂತ ಇವರ ನಂಬಿಕೆ. ಅದ್ಹೇಗಾದ್ರೂ ಇರಲಿ! ಅವನ ಅಬ್ಬರಿಕೆಗೆ ಉತ್ತರವೆಂಬಂತೆ "ನಿಮ್ಮನ್ನೆಲ್ಲಾ ಸಾಕಿ ದೊಡ್ಡವರನ್ನಾಗಿ ಮಾಡಿಲ್ಲವೇನೋ ? ಅದಕ್ಕಿಂತ ಇನ್ನೇನೋ ಸಾಧಿಸೋದು?" ಎಂದು ಮರು ಅಬ್ಬರಿಸಿದೆ.

"ಹೌದ್ಹೌದು! ಅದನ್ನೇನು ಕೆಲಸದ ಚಿನ್ನಮ್ಮನೂ ಸಾಧಿಸಿದ್ದಾಳೆ. ಅದಕ್ಕೇನು M.A. ಬೇಕಾಗಿಲ್ಲವಲ್ಲ. ಹೋಗಲಿ, ನನ್ನ ಮುಂದಿನ ವರ್ಷದ Donationಗೆ ಅಂತ ಒಂದೆರಡು ಲಕ್ಷ ಕೂಡಿಟ್ಟು ಜೀವನದಲ್ಲಿ ಕೊಂಚ ಸಾಧಿಸೋಣವಾಗಲಿ" ಎಂದು ಕೂಗಿ ಹೇಳಿ ಮನೆಯಿಂದ ಕಾಲು ಕಿತ್ತ. ಅವನು ಬಿಟ್ಟ ಬಾಣ ಎದೆಗೆ ಸರಿಯಾಗಿ ಹೊಕ್ಕಿತು.

"ಹೌದು! ನಾನು ನನ್ನ ಜೀವನದಲ್ಲಿ ಸಾಧಿಸಿದ್ದಾದರೂ ಏನು ?" ಎಂದು ಅನ್ಯ ಮನಸ್ಕಳಾಗಿ ಯೋಚಿಸುತ್ತಾ ಕುಳಿತೆ. ಅದರ ಸುಳಿವು ಸಿಕ್ಕ ಮರಿ ಹೋಂ ವರ್ಕ್ ಪುಸ್ತಕವನ್ನೆಲ್ಲಾ ಒಂದ್ಕಡೆ ಎಸೆದು, ತಟ್ಟೆಯಲ್ಲಿದ್ದ ಕೋಡುಬಳೆಗಳನ್ನೆಲ್ಲಾ ಜೇಬಿಗೆ ಸೇರಿಸಿ, ಮೆಲ್ಲನೆ ಅಲ್ಲಿಂದ ಕಂಬಿಕಿತ್ತ.

ಅಷ್ಟರಲ್ಲಿ ಅಲ್ಲೇ ಇದ್ದ TV ಇಂದ "ಒನ್ನಿ ! ಕೊಂಚ ಕಲಿಸೋಣ! ಏನನ್ನಾದರೂ ಸಾಧಿಸೋಣ" ಎಂಬ ಧ್ವನಿ ನನ್ನನ್ನು ಎಚ್ಚರಿಸಿತು. ಅದು ನನಗಾಗಿಯೇ ಬಂದ ಆಕಾಶವಾಣಿ ಎಂದು ಭಾವಿಸಿದೆ. ಅನಕ್ಷರಸ್ಥರನ್ನೆಲ್ಲಾ ಅಕ್ಷರಸ್ಥರನ್ನಾಗಿಸುವ ಕರೆ.

"ಆಹಾ ! ಕಲಿಸುವೆ. ಕಲಿಸಿ ಸಾಧಿಸುವೆ—ಜೀವನದಲ್ಲಿ ಏನನ್ನಾದರೂ ಸಾಧಿಸೇ ಸಾಧಿಸುವೆ" ಮನ ಮುದದಿಂದ ಕುಣಿಯಿತು. ಕಲಿಸುವುದು ಯಾರಿಗೆ ಎಂಬ ಪ್ರಶ್ನೆಯೇ? ಅಯ್ಯೋ! ಯಾರಿಗೇನು ಬಂತು? ಒಳ್ಳೆ ಬೆಣ್ಣೆ ಇಟ್ಟುಕೊಂಡು ತುಪ್ಪಕ್ಕೆ ಅತ್ತ ಹಾಗೆ. ಇದ್ದಾಳಲ್ಲಾ ನಮ್ಮ ಚಿನ್ನಮ್ಮ. ಅವಳಿಂದ ಶ್ರೀ ಗಣೇಶ ಮಾಡಿ ಊರಿನ ಅನಕ್ಷರಸ್ಥರನ್ನೆಲ್ಲಾ ಅಕ್ಷರಸ್ಥರನ್ನಾಗಿಸುವೆ.

"ಚಿನ್ನಮ್ಮಾ ಎಂದೆ ಮಾರನೆ ಬೆಳಗ್ಗೆ ಮೃದುವಾಗಿ. ಮಧುರವಾಗಿ, ಮನೆಯಲ್ಲಿ ಯಾರ ಮೇಲೆ ಬೇಕಾದರೂ ಕರ್ಕಶವಾಗಿ ಅರಚಿ ಕೂಗಾಡಬಹುದು. ಆದರೆ ಚಿನ್ನಮ್ಮನ ಮೇಲೆ ಮಾತ್ರಾ ಕೂಡದು. ಹಾಗೆ ನಮ್ಮ ಮೇಲೆ ರೇಗಾಡಿ ಕೂಗಾಡುವ ಅಧಿಕಾರ ಮಾತ್ರ ಅವಳದ್ದೇ ಹೊರತು, ನಮ್ಮದಲ್ಲ.

"ಏನ್ರಮ್ಮಾ! ಈಗ ನನ್ನೊಡೆ ಮಾತಾಡ್ನೇಬೇಡಿ. ನನಗೆ ಬೋ ಕೆಲ್ಸ. ಪುರ್ರೊತ್ತೇ ಇಲ್ಲ" ಎಂದು ಗರ್ಜಿಸಿದಳು.

ಹಾಗೆ ಅಲ್ಲೊಂದು ಇಲ್ಲೊಂದು ಪರಕೆ ಎಳೆ ಎಳೆದು ಪಾತ್ರೆಗಳನ್ನು ತೊಳೆಯೋದಕ್ಕಿಂತ ಜಾಸ್ತಿ ಎಸೆದು ಓಡಿಬಿಟ್ಟಳು

ನನ್ನ ಉತ್ಸಾಹವೆಲ್ಲಾ ಭರ್ರೆಂದು ಇಳಿದುಹೋಯಿತು. ಆದರೆ ಹಿಡಿದ ಪಟ್ಟಂತೂ ಬಿಡುವವಳಲ್ಲಾ ನಾನು. ಮಧ್ಯಾಹ್ನ ಅವಳು ಬಂದಾಗ ಪುನಃ ಉತ್ಸಾಹದಿಂದ "ಚಿನ್ನಮ್ಮಾ" ಎಂದೆ.

"ಏನ್ರಮ್ಮಾ! ಏನ್ಹೇಳ್ತೀರೋ ಬೇಗ್ಹೇಳಿ. ನಂಗೆ ನಿಮ್ಜೊತೆ ಆಟ ಆಡೋಕೆ ಟೇಮಿಲ್ಲ" ಎಂದಳಾದರೂ, ಪರಕೆ ಒಂದೆಡೆ ಎಸೆದು ಹಾಗೇ ನಿಂತುಕೊಂಡಳು.

"ಏನೇ ನಿನಗೆ ಓದು ಬರೆಯು ಮಾಡೋದಕ್ಕೆ ಬರುತ್ತೇನೆ?"

"ಇದೇನ್ರಮ್ಮಾ, ಇಷ್ಟು ವರ್ಷದ ಮ್ಯಾಗೆ ಹೀಗೆ ಕೇಳ್ತಿದೀರಿ. ನಿಮಗೇನಾದ್ರೂ ತಲೆ ಕೆಟ್ಟಿದೆಯೋ ? ನಿಮಗೇನೂ ಮಾಡೋಕ್ಕೆ ಕೆಲ್ಸವಿಲ್ಲವೇನು ತಾಯಿ?" ಎಂದಳು. ಆದರೆ ನಗುನಗುತ್ತಾ ಇದ್ದಳು.

"ನಾಳೆಯಿಂದ ನಿನಗೆ ಓದುವುದು, ಬರೆಯೋದು ಹೇಳಿ ಕೊಡುತ್ತೀನಿ. ಕಲ್ತುಕೋ! ಹಾಗೆ ಪೆದ್ದು ಪೆದ್ದಾಗಿರಬಾರದು" ಎಂದೆ ಮರಿಯ ಹಳೆ ಸ್ಲೇಟೊಂದನ್ನು ಒರೆಸುತ್ತಾ.

ನಾಲ್ವತ್ತರ ಚಿನ್ನಮ್ಮ ನವ ವಧುವಿನಂತೆ ನಾಚುತ್ತಾ ಮುಖ ಮುಚ್ಚಿಕೊಂಡಳು. "ಅಯ್ಯೋ! ಹೋಗ್ರಮ್ಮಾ ನಿಮಗೆಲ್ಲಾ ತಮಾಸಿನೇ"

"ತಮಾಷಿ ಅಲ್ಲಾ ಕಣೇ. ಸರ್ಕಾರದೋರು ದಿನಾ ಟೀವೀಲಿ, ರೇಡಿಯೋಲಿ ಪಾಠ ಎಲ್ರೂ ಕಲೀರಿ ಅಂತ ಹೇಳೋದು ಕೇಳಲ್ವೇ?" ಎಂದೆ.

Definite ಆಗಿ ಎಲ್ಲಿ ಇಲ್ಲ ಅಂದು ಬಿಟ್ಟು ಹೊರಟು ಹೋಗುತ್ತಾಳೋ ಎಂದು ಭಯವಾಯಿತು. ಹಾಗೆ ಮಾಡಲಿಲ್ಲ. ಕೊಂಚ ಹೊತ್ತು ಸುಮ್ಮನಿದ್ದಳು. ಏನೋ ಯೋಚಿಸ್ತಾ ಇದ್ದಾಳೆ ಅಂದುಕೊಂಡೆ.

"ಏನ್ರಮ್ಮಾ ಒಂದು ಹಳೆ ಸೀರೆ ಕೊಡ್ರಮ್ಮಾ. ಒಂದೂ ಸೀರೇನೇ ಇಲ್ಲ" ಎಂದಳು.

ಏನೇ ಹೋದ ತಿಂಗಳು ತಾನೇ ನಿನಗೊಂದು ಹಳೆ ಸೀರೇನೆ ಕೊಟ್ಟಿದ್ದೆನಲ್ಲೇ ಎಂದು ಜ್ಞಾಪಿಸಬಹುದಾಗಿತ್ತು. ಆದರೆ ಹಾಗೆ ಮಾಡಲಿಲ್ಲ. ಬೇಗ ಒಳಗೆ ಹೋಗಿ ಸುಮಾರು ಹೊಸ ಸೀರೆಯೊಂದನ್ನು ತಂದು ಅವಳ ಮುಂದೆ ಹಿಡಿದೆ.

ಸರಿ! ಶುಭ ಕಾರ್ಯಕ್ಕೆ ತಡೆ ಏಕೆ ಅಂತ ಶುರು ಮಾಡಿಯೇ ಬಿಟ್ಟೆ. ಸ್ಲೇಟಿನ ಮೇಲೆ ಅಕ್ಷರ ಬರೆದು ಅದರ ಮೇಲ ಬಿಡದೆ ತಿದ್ದು ಎಂದು ಹೇಳಿದೆ. ನಾನ್ಹೇಳಿದಂತೆ ನಾಲ್ಕು ಸರ್ತಿ ಬರೆದಿರಬಹುದು. ಒಂದು ದೊಡ್ಡ ಆಕಳಿಕೆ ಬಿಟ್ಟು, "ಅಯ್ಯೋ! ಇನ್ನೂ ಒಳ ಮನೆ ಕೆಲ್ಸ ಇವೆ ಕಣ್ರಮ್ಮ. ನಾಳೆ ಬರ್ಕೊಂಡು ಬರ್ತೀನಿ" ಅಂತ ಸ್ಲೇಟನ್ನು ತೆಗೆದುಕೊಂಡು ಹೊರಟವಳು ಎರಡು ದಿನಗಳು ಈ ಕಡೆ ತಲೆ ಹಾಕಲೇ ಇಲ್ಲ. ಕಾದೂ ಕಾದೂ ನಾಕಾಗಿ ಎಲ್ಲಾ ಕೆಲ್ಸ ಮಾಡ್ಕೊಂಡೆ. ಅವಳು ಮಾಡುತ್ತಿದ್ದ ಮತ್ತೊಂದು ಮನೆಯಾಕೆ ಸಿಕ್ಕಾಗ "ಏನ್ರೀ! ಚಿನ್ನಮ್ಮಾ ಎಲ್ಲಿ? ಆಸಾಮಿ ಪತ್ತೇನೆ ಇಲ್ವಲ್ಲಾ ಎರಡು ದಿನಗಳಿಂದ" ಎಂದು ಕೇಳಿದೆ. ಅವರು ಅದಕ್ಕೆ "ಓಹೊ! ನೀವೋ ಅವಳ ಟೀಚರ್. ನಿನ್ನೆ ಸಾಯಂಕಾಲ ಗೋಡೆ ಹತ್ತಿರ ನಿಂತ್ಕೊಂಡು ಪಕ್ಕದ ಮನೆ ಕೆಲ್ಸದೋಳ ಹತ್ರ, ನೋಡಮ್ಮಿ! ಯಾವುದೋ ಮೂದೇವಿ ನಂಗೆ ಪಾಠ ಕಲಿಸ್ತಾರಂತೆ. ಈ ವಯಸ್ಸನಾಗೆ ನಾನೇನು ಕಲ್ತೇನು ಹೇಳು. ಅದೇನೋ ಸರ್ಕಾರದೋರು ಎಲ್ರಿಗೂ ಕಲ್ಸು ಅಂತ ಹೇಳ್ತಾರೆ. ನಿಂಗೂ ಹೇಳಿ ಕೊಡ್ತೀನಿ ಅಂತು. ಅದೇ ನೆಪ ಮಾಡಿಕೊಂಡು ಒಂದು ಒಳ್ಳೆ ಸೀರೆನೂ ಹೊಡೆದುಬಿಟ್ಟೆ. ಈಗ ನೋಡು ಎರಡು

ದಿನಕ್ಕೆ ಒಂದಪ ಕೆಲ್ಸಕ್ಕೆ ಹೋಗ್ತೀನಿ. ಯಾಕೇಂತ ಬೈದರೆ ನೀವು ಬರ್ಕೊಟ್ಟ ಪಾಠ ಕಲೀತಿದ್ದೆ ಅಂತೀನಿ ಅಂತ ಹೇಳ್ತಿದ್ದನ್ನ ಕೇಳ್ಸಿ ಕೊಂಡೇರಿ. ನಿಮಗ್ಯಾಕ್ರಿ ಈ ತಾಪತ್ರಯವೆಲ್ಲಾ? ಕೆಲ್ಸದೋರಿಗೇನು ಒಂದು ನಣ್ಣ ನೆಪ ಸಾಕು ಚಕ್ಕರ್ ಹಾಕೋಕೆ. ಹೋಗಲಿ ನಾಳೆ ಕೆಲಸಕ್ಕೆ ಬಂದಾಗ ನಿಮ್ಮನೆಗೆ ಮೊದಲು ಕಳುಹಿಸ್ತೀನಿ" ಎಂದರು.

ಮಾರನೆಯ ಬೆಳಗ್ಗೆ ಕೆಲಸಕ್ಕೇನೋ ಬಂದಳು ಚಿನ್ನಮ್ಮ. ಅವಳ ಪಾಠ ಮಾತ್ರ ಅವತ್ತಿಗೇ ಕೊನೆಯಾಯ್ತು.

ಅವತ್ತು ಮಧ್ಯಾಹ್ನ ಒಳಗಡೆ ಏನೋ ಕೆಲ್ಸ ಮಾಡ್ತಿದ್ದೆ. "ಅಮ್ಮೋರೇ" ಎಂಬ ಗಡಸು ಧ್ವನಿ ಕೇಳಿ "ಯಾರಪ್ಪಾ ಎಂದುಕೊಂಡೇ ಹೊರಗೆ ಬಂದೆ. ಅಲ್ಲಿ ನಿಂತಿದ್ದ ಆರಡಿ ಎತ್ತರದ ಆ ಅಜಾನುಬಾಹು ಶನೀಶ್ವರ ದೇವಸ್ಥಾನದ ಪೂಜಾರಿ. ಆಗ್ಗೆ, ಈಗ್ಗೆ ಎನ್ನುವಂತೆ ತಿಂಗಳಿಗೆ ಒಂದೆರಡು ಸರ್ತಿ ಬರ್‍ತಾನೆ ಚಂದಾ ವಸೂಲಿ ಎಂದು.

"ಹೋಗೋ ! ಕಾಡಿಸ್ಬೇಡ. ಏನೂ ಕೋಡೋಲ್ಲ" ಅಂತ ಅನ್ನೋಣ ಅಂದು ಕೊಂಡರೂ ಅನ್ನೋ ಧೈರ್ಯ ಬಂದಿಲ್ಲ. ಯಾಕೇಂದರೆ ಅದು ಶನೇಶ್ವರ ದೇವಸ್ಥಾನ ತಾನೆ. ಹಾಗೇ ಮುಖ ಗಂಟು ಹಾಕಿಕೊಂಡೇ ಚಂದು ಕೊಡೋ ಅಭಾಸ ಇಟ್ಟಿದ್ದೀನಿ. ಆದರೆ ಈ ಸರ್ತಿ ನಗು ನಗುತಾನೇ ಅವನ ಮುಂದೆ ಎರಡು ರೂಪಾಯಿ ನೋಟನ್ನು ಮುಂದೆ ಹಿಡಿದೆ. ಗೊತ್ತಿತ್ತಲ್ಲ ಅವನು ಅನಕ್ಷರಸ್ಥ ಅಂತ. ನನ್ನ 2 ರೂ. ಎಡಗೈಲಿ ಕಿತ್ತುಕೊಂಡು ಬಲಗೈಯಿಂದ ಹಲ್ಲು ಚುಚ್ಚುತ್ತಾ ಹಲ್ಲು ಕಿರಿದ. ನನಗರ್ಥವಾಯ್ತು.

"ಹೋಗಪ್ಪಾ ಸಾಕು ! ಎರಡು ರೂಪಾಯಿಗಿಂತ ಇನ್ನೇನು" ಎಂದೆ. ಸುಲಭ ವಾಗಿ ಒಪ್ಪಿಕೊಂಡು ಬಿಟ್ಟ. ಕೈಲಿದ್ದ ಪುಸ್ತಕವನ್ನು ಮುಂದೆ ಒಡ್ಡಿದ 'ಬರಿ' ಎನ್ನುವ ಅರ್ಥದಲ್ಲಿ. ಚಂದಾ ಕೊಟ್ಟೋರ ಹೆಸರು, ಅಡ್ರೆಸ್, ಅಮೌಂಟ್ ಎಲ್ಲಾ ಬರ್ಕೋತಾನೆ.

"ಯಾಕೋ? ಬರ್ಕೊ ನೀನೇ" ಎಂದೆ.

"ಇಲ್ಲಮ್ಮಾ ! ನೀವೇ ಬರೀರಿ" ಎಂದು ತಲೆಗೆ ಸುತ್ತಿದ್ದ ಟವಲ್ ತೆಗೆದು ತಲೆ ಕೆರೆದುಕೊಂಡ.

"ಯಾಕೋ ಓದು, ಬರ್‍ದು ಮಾಡೋಕೆ ಬರೊಲ್ವೇನೋ?" ಎಂದೆ ಪುಸ್ತಕ ತೆಗೆದುಕೊಳ್ಳುತ್ತಾ.

ಇಲ್ಲವೆಂಬಂತೆ ತಲೆಯಾಡಿಸಿದ.

"ಹಾಗಾದ್ರೆ ನಾಳೆಯಿಂದ ಬಾ. ನಿನಗೆ ಓದೋದು ಬರ್‍ಯೋದು ಹೇಳಿ ಕೊಡ್ತೀನಿ" ಅಂದೆ ಸಾಧಿಸಿಬಿಟ್ಟೆನೆಂಬ ಸಂತೋಷದಿಂದ.

"ಅಯ್ಯೋ! ಹತ್ತು ರೂಪಾಯಿ ಕೊಟ್ಟೋರೆಲ್ಲಾ ಸುಮ್ಮಿದ್ದಾರೆ. ನೀನೇನು ಬರೇ ಎಲ್ಡು ರೂಪಾಯಿ ಕೊಟ್ಟು ಇಷ್ಟೆಲ್ಲಾ ಮಾತಾಡ್ತಿ. ಏ! ಸುಮ್ಕೆ ಬರೇಂದ್ರೆ. ನಂಗೇನೂ ಬೇರೆ ಕೆಲ್ಸಾ ಇಲ್ಲಾ ಅಂದ್ಕೊಂಡ್ರ" ಅಂತ ಕಣ್ಣು ಕೆಂಪಗೆ ಮಾಡಿಕೊಂಡು Note bookನ ಸರ್ ಅಂತ ಕಿತ್ಕೊಂಡು ಹೊರಟು ಹೋದ. ಅವನೇನು ಮಾಡ್ದ ಅಂತ ಅರಿವಾಗೋದಕ್ಕೇ ನನಗೆ ಎರಡು ನಿಮಿಷ ಬೇಕಾಯ್ತು. ಮನಸ್ಸಿಗೂ ತುಂಬಾ ಬೇಜಾರಾಯ್ತು.

ಅವತ್ತೇ ರಾತ್ರೆ ಪಾರ್ಕಿಂಗ್ ಹೋಗ್ತಾ ಇದ್ದೆ. ಬೆಂಗಳೂರು ರಸ್ತೆಗಳು ಗೊತ್ತಲ್ಲ. ದೀಪ ಇಲ್ಲದ ಅಥವಾ ಮಂಕು ದೀಪದ ಕತ್ತಲು ರಸ್ತೆಗಳು. ಹಳ್ಳಕೊಳ್ಳ ತುಂಬಿದ Footpathಗಳು. ಫುಟ್‌ಪಾತ್ ಮೇಲೇ ನಡೀತಿದ್ದೆ. ನೆಲ ನೋಡ್ಕೊಂಡು. ಕಣ್ಣಗಲಿಸಿ (ನನಗೇನೋ ಒಂದು ಭಾವನೆ. ಕತ್ತಲಿನಲ್ಲಿ ಕಣ್ಣು ಅಗಲ ಮಾಡಿಕೊಂಡರೆ ಚೆನ್ನಾಗಿ ಕಾಣುತ್ತೆ ಅಂತ) ಜೋಪಾನವಾಗಿ ಹೆಜ್ಜೆ ಹಾಕುತ್ತಿದ್ದೆ. ಇದ್ದಕ್ಕಿದ್ದಂತೆ ಪಕ್ಕದಿಂದೆಲ್ಲಿಂದಲೋ ಜೋರಾಗಿ "ಹ್ಹೆ ಹ್ಹೆ ಹ್ಹೆ! ಪಾರವಂತೆ, ಪಾರ ಹೇಳ್ಕೊಡ್ತಾಳಂತೆ" ಅಂತ ಕರ್ಕಶವಾಗಿ ನಕ್ಕ ಹಾಗೆ ಆಯ್ತು. ಒಂದೇ ಉಸಿರಿಗೆ ನಡು ಬೀದಿಗೆ. ದ್ವಿಚಕ್ರ, ತ್ರಿಚಕ್ರ, ನಾಲ್ಕು ಚಕ್ರಗಳ ಓಡಾಟವನ್ನೂ ಗಮನಿಸದೆ, ನೆಗೆದೆ. ಸ್ವಲ್ಪ ಧೈರ್ಯ ಬಂದಂತಾದ ಮೇಲೆ 'ಬದುಕಿದೆಯಾ ಬಡ ಜೀವವೇ' ಎಂದುಕೊಂಡು ಧ್ವನಿ ಎಲ್ಲಿಂದ ಬಂತು ಅಂತ ನೋಡಿದ್ರೆ ಅಲ್ಲೇ ಮರದ ಕೆಳಗೆ ಅರ್ಧ ಚಕ್ರಾಕಾರದಲ್ಲಿ ಮಲಗಿದ್ದಾನ ಚಂದಾ ಎತ್ತಿ ಹೋದ ಶನೇಶ್ವರ ದೇವಸ್ಥಾನದ ಪ್ರತಿನಿಧಿ. ಸ್ವಲ್ಪ ದೂರದಲ್ಲೇ ಬೀಡಿ ಸೇದುತ್ತಾ ಕುಳಿತಿದ್ದ ವ್ಯಕ್ತಿ ಕಡೆ ಪ್ರಶ್ನಾರ್ಥಕವಾಗಿ ನೋಡಿದೆ.

"ಅಯ್ಯೋ! ಶನೀಶ್ವರನ ದೇವಸ್ಥಾನದ ಪೂಜಾರಿ, ತಾಯಿ. ಬೆಳಗ್ಗೆ ಚಂದ ಎತ್ತಿ ಬಂದು, ಈಗ ಕಂಠ ಪೂರ್ತಿ ಹಾಕಿ, ಜ್ಞಾನ ತಪ್ಪಿ ಬಿದ್ಕೊಂಡಿದ್ದಾನೆ ತಾಯಿ. ಏನೂ ಹೆದರ್ಕೋಬೇಡ ಅಮ್ಮಣ್ಣಿ" ಅಂತ ಹೇಳಿ ದಂ ಎಳೆದು ಕ್ಯಾಕರಿಸಿ ಉಗಿದು, "ಬಡ್ಡೀಮಗ! ಎಲ್ಲಾ ಒಬ್ನೇ ಹೀರಿಬಿಟ್ಟ" ಅಂತ ಗೊಣಗಿಕೊಂಡ. ಆದರೆ ಆ ಪೂಜಾರಿ ಹಾಗೆ ನಕ್ಕಿದ್ದೇಕೆ ?

ಅನಕ್ಷರಸ್ಥರಾದರೇನು ? ತಮಗೆ ಬೇಕಾದ್ದನ್ನ ಪಡೆಯುವ ಛಾತಿಯಾದರೂ ಇದೆಯಲ್ಲ ಇವರಿಗೆಲ್ಲ ಅಂದುಕೊಂಡೆ.



# ಸಾಂಟಾ ಕ್ಯಾಟಲೀನಾ

ಶಾಂತಾ ರಘು

---

ಲಾಸ್ ಏಂಜಲೀಸ್‌ಗೆ 22ಮೈಲಿ ದೂರದಲ್ಲಿ, ಪೆಸಿಫಿಕ್ ಮಹಾ ಸಮುದ್ರದ ನಡುವೆ ಒಂದು ಪುಟ್ಟ ಪಚ್ಚೆಯ ಮಣಿಯಂತೆ ಕೂತಿದೆ ಸಾಂಟಾ ಕ್ಯಾಟಲೀನಾ ದ್ವೀಪ. ಅಲ್ಲಿಗೆ ಹೋಗಿ ಬಂದೋರೆಲ್ಲ 'ಆಹಾ ! ಓಹೋ !' ಎಂದು ಆನಂದೋದ್ಗಾರ ಮಾಡ್ತಾ ಇದ್ದಿದ್ರಿಂದ, ಒಂದು ವೀಕೆಂಡ್ ನಾವೂ ಹೊರಟ್ವಿ.

ಹಡಗು, ಹೆಲಿಕಾಪ್ಟರ್, ಪ್ಲೇನು, ಹ್ಯಾಗಾದರೂ ಹೋಗಬಹುದು. ನಾವು ಹಡಗಲ್ಲೇ ಹೋಗೋಣಾಂತ, ಲಾಂಗ್ ಬೀಚ್‌ಗೆ ಬೆಳಗ್ಗೆ 6 ಗಂಟೆಗೇ ಹೋದ್ವಿ. ಅಲ್ಲಿನ ಬಂದರಿನಿಂದ್ಲೇ ಕ್ಯಾಟಲೀನಾಗೆ ಹಡಗುಗಳು ಹೊರಡೋದು. ಆಗ್ಲೇ ನೂರಾರು ಜನ ಘೇರಾಯಿಸಿ ಬಿಟ್ಟಿದ್ರು. ನಮ್ಮಂತೆ ಕೈ ಬೀಸ್ಕೊಂಡು ಬಂದಿರಲಿಲ್ಲ. ಸೈಕಲ್‌ಗಳು, ಮೋಟಾರ್ ಬೈಕ್‌ಗಳು, ಸ್ಕೇಟಿಂಗ್ ಬೋರ್ಡ್‌ಗಳು, ಸ್ನಾರ್ಕೆಲ್‌ಗಳು, ಸ್ಕುಬಾ ಡೈವಿಂಗ್ ಸಲಕರಣೆಗಳು, ಎಲ್ಲ ಹೊತ್ಕೊಂಡು ಸಂಭ್ರಮದಿಂದ ಹೊರಟುಬಿಟ್ಟಿದ್ದರು.

ನಮ್ಮ ಹಡಗಿನ ಹೆಸರು ಕ್ಯಾಟಲೀನಾ ಕಿಂಗ್. ಕ್ಯಾಟಲೀನಾ ಕ್ವೀನ್, ಕ್ಯಾಟಲೀನಾ ಪ್ರಿನ್ಸ್, ಕ್ಯಾಟಲೀನಾ ಫ್ಲೈಯರ್, ಅಂತ ಪಕ್ಕದಲ್ಲೇ ಹಲವಾರು ಹಡಗುಗಳು ನಿಂತಿದ್ವು. ಇಲ್ಲಿಂದಲ್ಲಿಗೆ, ಅಲ್ಲಿಂದಿಲ್ಲಿಗೆ ಹೋಗಿ ಬರೋದೇ ಅವಕ್ಕೆ ಕೆಲಸ.

ಹಡಗಿಗೆ ಮೂರು ಅಂತಸ್ತು. 700ಜನ ತುಂಬಿದ್ದರು. ಕೆಳಗಿನ ಅಂತಸ್ತುಗಳಲ್ಲಿ ಆಗಲೇ ಜನ ಕಾರ್ಖಾನೆ ಚಿಮಣಿಗಳ ತರಹ ಹೊಗೆ ಬಿಡೋಕೆ ಶುರು ಮಾಡಿದ್ರಿಂದ, ಮೇಲಿನ ಅಂತಸ್ತಿಗೆ ಹೋದ್ವಿ. ಭಯಂಕರ ಕುಳಿರ್ಗಾಳಿ. ಉಣ್ಣೆಯ ಬಟ್ಟೆಗಳಿಂದ ಪೂರಾ ಕವರ್ ಮಾಡಿಕೊಳ್ಳಲೇಬೇಕು.

ಹಡಗು ಆಮೆ ವೇಗದಲ್ಲಿ ಚಲಿಸಿತು. ಗೈಡ್ ಮೈಕಿನಲ್ಲಿ ವಿವರಿಸ್ತಾನೇ ಇದ್ದ. ದಾರಿಯಲ್ಲಿ ಬ್ರಹ್ಮಾಂಡ Luxury liner— 'ಕ್ವೀನ್ ಮೇರಿ' ನೋಡಿದ್ವಿ. ರಾಕ್ಷಸಾಕಾರದ ಈ ಹಡಗಿನ ಉದ್ದ 1,500ಅಡಿ. ಈಗ 5 ಸ್ಟಾರ್ ಹೋಟಲಾಗಿದೆ.

22 ಮೈಲಿಯನ್ನು 2 ಗಂಟೆ ಹೊತ್ತಿನಲ್ಲಿ ಪಯಣಿಸಿದೆವು. ಈ ಸ್ಪೀಡೇ ಎಷ್ಟೋ ಜನಕ್ಕೆ ಆಗ್ಲಿಲ್ಲ. Sea sick ಆಗಿ, ಹೊಟ್ಟೆ ತೊಳಸಿ, ಕೆಟ್ಟ ಮುಖ ಮಾಡ್ಕೊಂಡು ಕೆಲವರು ಕೂತಿದ್ರೆ, ಕೆಲವರು ಕಂಬಳಿ ಹೊದ್ಕೊಂಡು, ತೆಪ್ಪಗೆ ಮುಸುಕು ಹಾಕಿ ಮಲಗಿ ಬಿಟ್ರು. ಮುಕ್ಕಾಲು ಪಾಲು ಜನ ತಿಂದ್ಕೊಂಡೇ, ಕುಡ್ಕೊಂಡೇ ಬಂದ್ರು. ಅಮೆರಿಕನ್ನರ ಅಪೆಟೈಟ್‌ಗೆ ಅಂತ್ಯವೇ ಇಲ್ಲ !

ಹತ್ತು ಗಂಟೆಗೆ ಕ್ಯಾಟಲೀನಾ. ಈ ದ್ವೀಪವನ್ನು 1542ರಲ್ಲಿ ಕಂಡುಹಿಡಿದರು 450 ವರ್ಷಗಳಿಂದ ಒಂದು ಚೂರೂ ಬದಲಾಗಿಲ್ವಂತೆ. ಅದೇ ಶಾಂತ ವಾತಾವರಣ, ಚಿಮ್ಮಿ ಆಡ್ತಾ ಇರೋ ಸೀಲ್‌ಗಳು. ಊಹೆಗೂ ನಿಲುಕದ ತರಹಾವರಿ ಮೀನು, ಹಕ್ಕಿ, ಹೂ ಗಿಡಗಳು, ಹತ್ತಲು ಬೆಟ್ಟಗಳು, ಓಡಾಡಲು ಕಣಿವೆಗಳು, ಕ್ಯಾಟಲೀನಾ ಒಂದು ಪುಟ್ಟ ಸ್ವರ್ಗ !

ಮುಖ್ಯ ಊರು ಆವಲಾನ್. ಅದರ ಉದ್ದವೇ ಒಂದು ಮೈಲಿ. ಈ ಕಡೆ ಯಿಂದ ವೇಗವಾಗಿ ನಡೆದು ಹೋದ್ರೆ, ಆ ಕಡೆ ಸಮುದ್ರದಲ್ಲಿ ಬಿದ್ದು ಹೋಗಬಹುದು !

ಇಳಿದು ಹಾಗೇ ನಡಕೊಂಡು ಹೋದ್ವಿ. ಜಗಿ ಜಗಿ ಜನಜಂಗುಳಿ. ಅಸಾಧ್ಯ ಬಿಸಿಲು. ಉಣ್ಣೆ ಬಟ್ಟೆ ಹಾಕ್ಕೊಂಡಿದ್ದವರೆಲ್ಲಾ, ಹಾವು ಪೊರೆ ಬಿಡುವ ಹಾಗೆ, ಒಂದೊಂದಾಗಿ ಕಳಚುತ್ತಾ ಹೋದ್ರು. ಅಲ್ಲಲ್ಲೇ ಪಾಕೆಟ್ ಹ್ಯಾಂಡ್‌ಕರ್‌ಚೀಫ಼ಿ ನಷ್ಟಗಲ ಬೀಚುಗಳು. ಅವುಗಳಲ್ಲಿ ಒಂಚೂರೂ ಜಾಗ ಬಿಡದೆ, ನೂರಾರು ಹೆಣ್ಣು ಗಂಡುಗಳು Sun bath ತೊಗೋತಾ ಇದ್ರು ಕರ್ಚೀಫ್‌ನಷ್ಟೇ ಚಿಕ್ಕ ಬಿಕಿನಿಗಳು, ಈಜುವ ಉಡುಪುಗಳನ್ನು ಹಾಕ್ಕೊಂಡು, ಲೋಷನ್‌ಗಳನ್ನು ಬಳಿದುಕೊಂಡು, ಬಲು ಪ್ರಯಾಸದಿಂದ ತಮ್ಮ ಬಿಳೀ ಬಣ್ಣವನ್ನ ಕಂದು ಮಾಡ್ಕೊಳ್ಳಲು ಪ್ರಯತ್ನ ಪಡ್ತಾ ಇದ್ರು !

ಎಂಥ ವಿಪರ್ಯಾಸ ! ತಮ್ಮ ಸುಂದರ ಕಂದು ಬಣ್ಣವನ್ನ ಮೇಕಪ್, ಸ್ನೋ, ಪೌಡರ್ ಬಳಿದು ಕುಲಗೆಡಿಸ್ತಾ ಇರೋ ಭಾರತೀಯರು ! ಆ ಕಂದು ಬಣ್ಣಕ್ಕಾಗಿ ಹಂಬಲಿಸಿ, ಗಂಟೆಗಟ್ಲೆ ಅಲ್ಲಾಡದೆ ಬಿಸಿಲಲ್ಲಿ ಬಿದ್ಕೊಂಡು ಬೇಯ್ತಾ ಇರೋ ಪಾಶ್ಚಿಮಾತ್ಯರು ! ನನ್ನ ಬ್ರೌನ್ ಬಣ್ಣಕ್ಕೆ ನಾನೇ ಹೆಮ್ಮೆಪಟ್ಕೊಂಡೆ !

ಸೂರ್ಯನಿಗೆ ಹೀಗೆ ಎಡೆಬಿಡದೆ ತಮ್ಮ ದೇಹವನ್ನು ಒಡ್ಡೋದ್ರಿಂದ ಅವರಿಗೆಲ್ಲ ಚರ್ಮದ ಕ್ಯಾನ್ಸರ್ ಬರೋದು ಜಾಸ್ತಿಯಂತೆ. ಸಧ್ಯ ನಮಗೆ ಆ ತಾಪತ್ರಯವಿಲ್ಲ ! Thank God for small mercies !

ಮುಂದೆ ಹೋದ್ರೆ ಕೆಲವರು ಇಂಡಿಯನ್ಸ್ ಸಹ Sun bathing ಮಾಡ್ತಾ ಇದ್ರು ! ಅಯ್ಯೊ ಗ್ರಹಚಾರವೇ ! "ಸರಿ ಮನೆಯವಳು ಸರಿಗೆ ಹಾಕ್ಕೊಂಡ ಮೇಲೆ, ನೆರೆಮನೆಯವಳು ನೇಣನ್ನಾದ್ರೂ ಹಾಕ್ಕೊಳ್ಳಲೇಬೇಕಂತೆ !"

"ಅಮೆರಿಕಾಗೆ ಬಂದು ಬಿಟ್ರೆ ಹೀಗಾಡ್ಬೇಕೆ ?" ಅಂತ ಕಮೆಂಟ್ ಮಾಡಿದೆ. ಬೇಕೂಂತ್ಲೇ.

ನಮ್ಮ ಜವಾನ್ರು "ಅದೇ ಕಣೆ ಲೈಫು. ದೇಶ್ಪಾನ ಮಟ್ಟಿಯಾದ್ರೆ ಪೂಾಸೆ ಮರ ಹತ್ಲೇ ಬೇಕು !" ಅಂತ ಒಂದು ಹೇಳಿಕೆ ಕೊಟ್ಟು ಮುಂದೆ ಹೋದ್ರು, ಬಲು ಪ್ರಾಕ್ಟಿಕಲ್ ಮನುಷ್ಯ !

ಅಮೆರಿಕನ್ನರು ಪಿಕ್‌ನಿಕ್ ಹೊರಟ್ರೆ, ಮನೆ ಮಂದಿಯಲ್ದೆ, ಮನೇಲಿರೋ ಪಕ್ಕಿ, ಬೆಕ್ಕು, ನಾಯಿ, ಕೋತಿ ಕಟ್ಕೊಂಡೇ ಹೊರಡೋದು. ಪುಟ್ಟ ಮಗುವನ್ನು ತಂದೆ ಬೆನ್ನಿಗೋ, ಹೊಟ್ಟೆಗೋ ಕಟ್ಕೊಂಡಿರ್ತಾನೆ. 3, 4 ವರ್ಷದ ಮಗುವಾದ್ರೆ ಹೆಗಲ ಮೇಲೆ ಕೂರಿಸ್ಕೋತ್ತಾನೆ, ತಾಯಿ ಪ್ರಾಂ ತಳ್ತಾಳೆ.

ಬೀಚಿನಲ್ಲಿ ನಾಯಿಗಳಿಗೆ ಅನುಮತಿ ಇಲ್ಲದ್ದರಿಂದ, ಅವನ್ನು ಅಲ್ಲಲ್ಲೇ ಕಟ್ಟಿಹಾಕಿದ್ರು

ಆವಲಾನ್‌ನಲ್ಲಿ ಒಂದೇ ಬೀದಿ. ಎರಡೂ ಕಡೆ ಬೇಕಾದ ಹಾಗೆ ಅಂಗಡಿಗಳು, ರೆಸ್ಟೋರೆಂಟ್‌ಗಳು· ಎಲ್ಲೆಲ್ಲೂ ಹೌಸ್‌ಫುಲ್.

ನಡೆಯಲು ಕಾಲು ನೋವಾದ್ರೆ ಪುಟಾಣಿ ಬ್ಯಾಟರಿ ಕಾರ್‌ಗಳನ್ನು ಬಾಡಿಗೆಗೆ ಹಿಡಿದು ತಿರುಗಬಹುದು. ಮೈಕ್ ಹಿಡಿದ ಗೈಡ್‌ಗಳು ಓಪನ್ ವ್ಯಾನ್‌ಗಳಲ್ಲಿ ಜನ ಗಳನ್ನು ತುಂಬಿಸ್ಕೊಂಡು ತಿರುಗ್ತಾ ಇದ್ರು.

ಮೊದಲು Glass bottom boat tripಗೆ ಟಿಕೆಟ್ ತೊಗೊಂಡ್ವಿ. ದೊಡ್ಡ ಬೋಟ್. 200 ಜನ ತುಂಬಿದ್ರು. ಆ ಬೋಟ್‌ನ ತಳ ಬರಿ ಗಾಜಿನದು. ಸುಮಾರು ಒಂದು ಗಂಟೆ ಹೊತ್ತು ನಿಧಾನವಾಗಿ ಸಮುದ್ರದಲ್ಲಿ ಕರಕೊಂಡು ಹೋಗ್ತಾರೆ. ಗಾಜಿನ ತಳದ ಮೂಲಕ ಅತ್ಯದ್ಭುತವಾದ ಕಾಮನ ಬಿಲ್ಲಿನ ಬಣ್ಣದ ಜಲಚರಗಳನ್ನು, ಸಮುದ್ರದಾಳದ ಗಿಡ ಪೊದೆಗಳನ್ನು ನೋಡಿದ್ವಿ. ನೋಡಲು ಎರಡು ಕಣ್ಣು ಸಾಲದು. ನಂಗಂತೂ ಯಾವುದೋ ನಿಬಿಡವಾದ ಕಾಡಿನ ಮೇಲೆ ಹೆಲಿಕಾಪ್ಟರ್‌ನಲ್ಲಿ ಹೋಗ್ತಾ ಇರೋ ಅನುಭವವಾಯ್ತು ! ಕ್ಯಾಲಿಫೋರ್ನಿಯಾದ ರಾಜ್ಯ ಮೀನಾದ 'ಗೆರಿಬಾಲ್ಡಿ' ನೋಡಿದ್ವಿ. ದಟ್ಟ ಕಿತ್ತಳೆ ಬಣ್ಣದ ದೊಡ್ಡ ಮೀನು. ಯಾರಾದ್ರೂ ಅದನ್ನ ಮುಟ್ಟಿದ್ರೆ, ಹಿಡಿದ್ರೆ, 500 ಡಾಲರ್ ಜುಲ್ಮಾನೆ !

ನೂರಾರು ಜನ ಸಮುದ್ರಕ್ಕೆ ಬಿದ್ದು, ಈಜುತ್ತಲೋ, ಚೆಂಡಾಡುತ್ತಲೋ, ಇಲ್ಲಾ ಸುಮ್ನೆ ಮುಳುಗೇಳುತ್ತಲೋ, ಅಸಾಧ್ಯ ಗಲಾಟೆ ಎಬ್ಬಿಸ್ತಾ ಇದ್ರು— ಕಪ್ಪೆಗಳನ್ನ ತಕ್ಕಡಿಗೆ ಹಾಕಿದ ಹಾಗೆ ! ಜಲಕ್ರೀಡೆಗಳಂತೂ ಅಸಂಖ್ಯ. ಸ್ಕುಬಾ

ಡೈವಿಂಗ್ ಸ್ನಾರ್ಕೆಲಿಂಗ್, ಸರ್ಫಿಂಗ್ ಹೀಗೆ. ನೂರಾರು ಪ್ಯಾಡ್ಲ್ ಬೋಟ್‌ಗಳು. ಒಂದು ನೂರು ಮೈಲಿ ವೇಗದಲ್ಲಿ ಹೋಗೋ ಬೋಟಿಗೆ ಪ್ಯಾರಾಚೂಟ್ ಕಟ್ಟಿ, ಪ್ಯಾರಾಸೆಯ್ಲಿಂಗ್ ಮಾಡ್ತಾ ಇದ್ರು. ನಮಗಿದೇನೂ ಬರ್‍ತಿರ್‍ಲಿಲ್ಲವಾದ್ರಿಂದ, ತೆಪ್ಪಗೆ ಬೀಚ್‌ನಲ್ಲೇ ಓಡಾಡ್ತಾ, ಅಲ್ಲಿ, ಇಲ್ಲಿ ನೋಡ್ತಾ ಆನಂದ ಪಡ್ತಾ ಇದ್ವಿ. ಕಣ್ಣು ಹಾಯಿಸಿದೆಡೆ ಎಲ್ಲಾ ಸಮುದ್ರದಲ್ಲಿ ನೂರಾರು ಸಣ್ಣ ದೊಡ್ಡ ಬೋಟ್‌ಗಳು, ಹಡಗುಗಳು, ಬಣ್ಣ ಬಣ್ಣದ ಬೃಹದಾಕಾರದ ಬಲೂನ್‌ಗಳು, ಬಾವುಟಗಳು. ಏನು ಸಂಭ್ರಮ !

ಕುದುರೆ ಸವಾರಿ ಬಂದ್ರೆ, ಎಲ್ಲ ಕಡೆ ಕುದುರೆ ಮೇಲೂ ಓಡಾಡ್ಬಹುದು. ನನಗೋ, ಕಾಶ್ಮೀರದಲ್ಲಿ ಒಂದ್ಸಲ ಪೋಟು ಕುದುರೆ ಮೇಲಿಂದ ಬಿದ್ದಾಗಿನಿಂದ ಕುದುರೆ ಅಂದ್ರೆ ಸ್ವಲ್ಪ ನಡುಕವೇ! ಮೋಟಾರ್ ಕೋಚ್‌ನಲ್ಲೇ ಟೂರ್ ಶುರು ಮಾಡಿದ್ವು. ಬೆಟ್ಟದ ತುದಿಯಿಂದ ಕಾಡಿನ ಅದ್ಭುತ ದರ್ಶನ. ಓಡಾಡುತ್ತಿದ್ದ ಕಾಡ್ಕೋಣ, ಕಾಡು ಮೇಕೆ, ಕಾಡು ಹಂದಿ, ನರಿ, ಜಿಂಕೆ, ಕ್ಯಾಲಿಫೋರ್ನಿಯದ ಹೆಸರುವಾಸಿ ಬಕ್ಕ ತಲೆಯ ಹದ್ದು.

ಊರಲ್ಲಿ ಚಕ್ರಾಕಾರದ ಭವ್ಯ ಕ್ಯಾಸಿನೋ. ಇದನ್ನು ಪೂರ್ತಿ ಸುತ್ತು ಹಾಕಲು ಒಂದು ಗಂಟೆಯೇ ಬೇಕು. ಬ್ರಹ್ಮಾಂಡವಾದ ಚರ್ಚ್. ತುದಿಯಲ್ಲಿದ್ದ ಭಾರಿ ಗಡಿಯಾರ ಗಂಭೀರವಾಗಿ ಗಂಟೆ ಬಾರಿಸುತ್ತಿತ್ತು.

ಎಲ್ಲವನ್ನೂ ನೋಡಿ ತಣಿದೆವು. ಇನ್ನು ಹಡಗು ಹೊರಡೋ ತನಕ ಅಲ್ಲಿ ಇಲ್ಲಿ ಅಡ್ಡಾಡೋದೇ ಕೆಲಸ. ಅದೂ ಸಹ ರೋಡ್‌ನಲ್ಲೇ. ಬೇಕಾದಷ್ಟು ಪಾರ್ಕ್‌ಗಳು, ಬೆಂಚುಗಳೇನೋ ಇದ್ವು. ಆದ್ರೆ ಅವನ್ನೆಲ್ಲಾ ಅಮೆರಿಕದ ಪ್ರೇಮಿಗಳು ಜೋಡಿ ಜೋಡಿಯಾಗಿ ಆಕ್ರಮಿಸಿಕೊಂಡ್ಬಿಟ್ಟಿದ್ರು ! ಆ ಕಡೆ ಹೋಗೋ ಹಾಗೇ ಇಲ್ಲ. ಅಮೆರಿಕದ ಪ್ರೇಮಿಗಳಿಗೆ, ನಾಚಿಕೆ, ಲಜ್ಜೆ, ಸಂಕೋಚ, ಇವೆಲ್ಲಾ ಸ್ವಲ್ಪ ಕಡಿಮೆಯೇ ! ! ಸಂಕೋಚವೇನಾದ್ರೂ ಆಗೋ ಹಾಗಿದ್ರೆ, ನಮಗೇ ಆಗಬೇಕಷ್ಟೆ ! !

ಆರು ಗಂಟೆಗೆ ಹಡಗು ಹೊರಟಿತು. ಮಬ್ಬುಗತ್ತಲೆ. ಬಲು ಸುಖಕರವಾಗಿ ಸುಸ್ತಾಗಿತ್ತು. ತನ್ನ ಸಾವಿರಾರು ವಿದ್ಯುತ್ ಕಣ್ಣುಗಳನ್ನು ಮಿಟುಕಿಸುತ್ತಾ ಸುಂದರ ಕ್ಯಾಟಲೀನಾ ವಿದಾಯ ಹೇಳಿತು.



# ಸಹಾಯ! ಸಹಾಯ!

ಪ್ರಿಯ ಓದುಗರೇ,

ದಯವಿಟ್ಟು ಇದೊಂದು ಹಾಸ್ಯ ಲೇಖನವೆಂದು ತಿಳಿಯಬೇಡಿ.

ಇಂದಿಗೆ ಅಪರಂಜಿಗೆ **ಎಂಟು ವರುಷ** ತುಂಬಿದೆ. ಎರಡು ನಿಮಿಷ ಓದಿ ಮನಸನ್ನು ಹಗುರಾಗಿಸಿಕೊಳ್ಳುವ ಹಾಸ್ಯ ಪತ್ರಿಕೆಯಲ್ಲಿ, ಪತ್ರಿಕೆಯ ಕಷ್ಟ ಕಾರ್ಪಣ್ಯಗಳ ವಿವರಣೆ ತಕ್ಕುದಲ್ಲ ಎಂಬ ಖಚಿತವಾದ ಅಭಿಪ್ರಾಯದಿಂದ, ಈವರೆಗೂ ಈ ವಿಷಯ ಪ್ರಸ್ತಾಪಿಸಲು ಹಿಂದೆ ಮುಂದೆ ನೋಡಿದೆವು. ಈಚೆಗೆ ಹಲವು ಓದುಗರು ಸಹಾಯ ಬೇಕಿದ್ದರೆ ಕೇಳಿ, ಅಂತ ತಾವಾಗಿಯೇ ಮುಂದ ಬಂದಿರುವುದರಿಂದ, ಒಮ್ಮೆಯಾದರೂ ಈ ಬಗ್ಗೆ ಬಿಚ್ಚು ಮನಸ್ಸಿನಿಂದ ಮಾತನಾಡುವುದರಿಂದ, ಪತ್ರಿಕೆಯ ಆರೋಗ್ಯಕರ ಬೆಳವಣಿಗೆಗೆ ಸಹಾಯವಾದರೆ ಯಾಕೆ ಸಹಾಯ ಕೋರಬಾರದು ಎನ್ನಿಸಿತು. ಹಾಗಾಗಿ ಈ ಪತ್ರ.

ಅಪರಂಜಿಯ ಚಂದಾದಾರರ ಸಂಖ್ಯೆ ಸುಮಾರು 700. ಮುಕ್ತ ಮಾರುಕಟ್ಟೆಯಲ್ಲಿ ವಿತರಣೆ ಮಾಡಲು, ಯಾವ ಏಜೆಂಟರೂ ಮುಂದೆ ಬಂದಿಲ್ಲ. 'ಹಾಸ್ಯ ಯಾರಿಗೆ ಬೇಕು?" ಅನ್ನುತ್ತಾರೆ. ಹಾಲಿ ಜಾಹಿರಾತುಗಳ ಒಟ್ಟು ವಾರ್ಷಿಕ ಮೌಲ್ಯ 5000/– ರೂ. ಮೀರಿಲ್ಲ. ಪತ್ರಿಕೆ ನನ್ನ ಕಾಲ ಮೇಲೆ ತಾನು ನಿಲ್ಲಬೇಕಾದರೆ, ಚಂದಾದಾರರ ಸಂಖ್ಯೆ ಕನಿಷ್ಟ ಪಕ್ಷ 2,500 ಅದರೂ ಆಗಬೇಕು. ಮೂರು ಕೋಟಿ ಕನ್ನಡಿಗರಲ್ಲಿ ಇದು ದೊಡ್ಡ ಸಂಖ್ಯೆಯೇ ಅಂತ ಆಶ್ಚರ್ಯ ಪಡಬೇಡಿ, ಇದು ಎಲ್ಲರ ಸಹಕಾರದಿಂದ ಆಗುವ ಕೆಲಸ. ಜಾಹಿರಾತುಗಳನ್ನು ತುಂಬು ಮನಸ್ಸಿನಿಂದ ನೀಡಬಲ್ಲ ಓದುಗರು ಅಷ್ಟನ್ನು ಮಾಡಿಕೊಟ್ಟರೆ, ಸ್ವಲ್ಪ ಮಟ್ಟಿಗೆ ಈ ಬವಣೆ ತಪ್ಪುತ್ತದೆ. ಮಗ್ಗಲು ಪುಟದಲ್ಲಿನ ಪ್ರಶ್ನಾವಳಿಯನ್ನು ತುಂಬಿಸಿ ತ್ವರೆಯಿಂದ ನಮಗೆ ಕಳಿಸಿ. ಇದರಿಂದ ಸಹಾನುಭೂತಿ, ಕಳಕಳಿ ಇರುವ ಓದುಗರನ್ನು ಗುರುತಿಸಿ ಅವರ ಸಕ್ರಿಯ ಸಹಕಾರವನ್ನು ಪಡೆಯುವ ಕೆಲಸ ಸುಗಮವಾಗುತ್ತದೆ. ನಿಮ್ಮ ಅಭಿಪ್ರಾಯ ಅಕ್ಟೋಬರ್ 20ನೇ ತಾರೀಖಿನ ಒಳಗೆ ನಮಗೆ ಸೇರಲಿ.

**ಎಂ. ಶಿವಕುಮಾರ್**
ಸಂಪಾದಕರು

# ಓದುಗರ ಅಭಿಮತ ಸಂಗ್ರಹ

(ದಯವಿಟ್ಟು ನಿಮ್ಮ ಅಭಿಮತವನ್ನು √ ಗುರುತು ಹಾಕಿ ವ್ಯಕ್ತಪಡಿಸಿ)

**'ಅಪರಂಜಿ' ಸಂಪಾದಕರಿಗೆ**

೧. ನನ್ನ ಚಂದಾವನ್ನು ಮುಂದುವರಿಸಿ ಸಹಕರಿಸುತ್ತೇನೆ ☐

೨. ನನ್ನ ಚಂದಾವನ್ನು ಆಜೀವ ಚಂದಾಕ್ಕೆ ಪರಿವರ್ತಿಸಿ ಸಹಕರಿಸುವೆ ☐

೩. ಹೊಸ ಚಂದಾದಾರರನ್ನು ನೋಂದಾಯಿಸಲು ಉತ್ಸುಕನಾಗಿದ್ದೇನೆ ☐

೪. ಜಾಹಿರಾತು ನೀಡಿ ಸಹಕರಿಸಬಯಸುವೆ ☐

೫. ಮುಕ್ತ ಮಾರುಕಟ್ಟೆಯಲ್ಲಿ ಪತ್ರಿಕೆಯನ್ನು ಯಶಸ್ವಿಯಾಗಿ ವಿತರಣೆ ಮಾಡಲು ನನ್ನ ಸಲಹೆಗಳಿವೆ. ☐

ನಿಮ್ಮ ಹೆಸರು

ವಿಳಾಸ

ಚಂದಾ ಸಂಖ್ಯೆ

ಸಹಿ

## ಅಪರಂಜಿ ಜಾಹೀರಾತು ದರಗಳು

| | | |
|---|---|---|
| ಪೂರ್ಣ ಪುಟ (Full Page)– | ರೂ. 800/- | ಮೂರು ಸಂಚಿಕೆಗಳಲ್ಲಿ ಸತತ |
| ಅರ್ಧ ಪುಟ (Half Page)– | ರೂ. 400/- | |
| ಕಾಲು ಪುಟ (Quarter Page)– | ರೂ. 250/- | |

ಜಾಹೀರಾತುಗಳನ್ನು ಅವುಗಳ ವರ್ಗಕ್ಕೆ ತಕ್ಕ ಚೆಕ್ಕುಗಳೊಡನೆ ಕೆಳಗಿನ ವಿಳಾಸಕ್ಕೆ ಕಳುಹಿಸಿ.

**ಅಪರಂಜಿ ಕಾರ್ಯಾಲಯ**
36, 6ನೇ ಮುಖ್ಯ ರಸ್ತೆ
ಮಲ್ಲೇಶ್ವರಂ ಬೆಂಗಳೂರು–560 003

ವಿ.ಸೂ:– ಚೆಕ್ಕುಗಳನ್ನು ಅಪರಂಜಿ ಹೆಸರಿಗೆ ನಮೂದಿಸಬಹುದು

**ಮೂಸ್‌ಕಾಟ್ ಆಗ್ರೋ ಕೆಮಿಕಲ್ಸ್**
**ಪ್ರೈವೇಟ್ ಲಿಮಿಟೆಡ್**

93, 3ನೇ ಘಟ್ಟ,
ಪೀಣ್ಯ ಇಂಡಸ್ಟ್ರಿಯಲ್ ಏರಿಯಾ,
ಬೆಂಗಳೂರು–560 058.

ದೂರವಾಣಿ 395902 ತಂತಿ 'ಮೂಸ್‌ಕಾಟ್' ಟೆಲೆಕ್ಸ್ -845-580
ಭತ್ತ, ಕಬ್ಬು ಮತ್ತು ಗೋಧಿಯ ಬೆಳೆಗಳಲ್ಲಿ ಕಳೆ ನಿಯಂತ್ರಣ ಮಾಡುವುದಕ್ಕೆ
''ನಾಕ್ವೀಡ್'' ಕಳೆನಾಶಕವನ್ನು ಉಪಯೋಗಿಸಿರಿ.

---

ಶುಭಾಶಯಗಳೊಂದಿಗೆ :–



**ಎನ್. ಎಸ್ ಗಿರಿಮಾಜಿ ಅಂಡ್ ಸನ್ಸ್**
**[ಬೆಂಗಳೂರು]**

ನಂ. 46, ಇಂಡಸ್ಟ್ರಿಯಲ್ ಸಬರ್ಬ್
ಯಶವಂತಪುರ, ಬೆಂಗಳೂರು–560 022.

